# ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಪ್ರಬಂಧ)

ಸಂಶೋಧಕ
ಎಸ್. ಗುರುಪ್ರಸಾದ್

ಮಾರ್ಗದರ್ಶಕರು
ಡಾ. ಶಿವಾನಂದ ಎಸ್. ವಿರಕ್ತಮಠ
ಸಹ ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ





ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬



೨೦೦೯-೧೦

# ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಪ್ರಬಂಧ)


ಸಂಶೋಧಕ

ಎಸ್. ಗುರುಪ್ರಸಾದ್

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಸಹ ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ







ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಪ್ರಮಾಣ ಪತ್ರ

**'ಗುಡಿ ಕೈಗಾರಿಕೆಗಳಲ್ಲಿ ಮಹಿಳಾ ಬದುಕು'** ಎಂಬ ಶೀರ್ಷಿಕೆಯ ಸಂಪ್ರಬಂಧ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಶಿವಾನಂದ ಎಸ್. ವಿರಕ್ತಮಠ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

S. Guruprasad
(ಎಸ್. ಗುರುಪ್ರಸಾದ)

ಸ್ಥಳ: ವಿದ್ಯಾರಣ್ಯ
ದಿನಾಂಕ: 15.9.10.

# ದೃಢೀಕರಣ ಪತ್ರ

**ಎಸ್. ಗುರುಪ್ರಸಾದ** ಇವರು **'ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಇವರು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 15/9/10

**(ಡಾ. ಶಿವಾನಂದ ಎಸ್. ವಿರಕ್ತಮಠ)**
ಮಾರ್ಗದರ್ಶಕರು

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಾಯ ಒಂದು : ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ, ಹಾಗೂ ವೈಧಾನಿಕತೆ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ಮಹತ್ವ

೧.೪ ಅಧ್ಯಯನದ ವ್ಯಾಪ್ತಿ

೧.೫ ಅಧ್ಯಯನದ ವೈಧಾನಿಕತೆ

## ಅಧ್ಯಾಯ : ಒಂದು

# ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು

### ೧.೧ ಪ್ರಸ್ತಾವನೆ

ಪ್ರತಿಯೊಂದು ಸಮುದಾಯಕ್ಕೂ ಅವರದೇ ಆದ ವೃತ್ತಿ ಬದುಕು ಇದ್ದೇ ಇರುತ್ತದೆ. ಅವರದೇ ಆದ ಕಸುಬು, ಉಪಕಸುಬುಗಳು ಇರುವುದನ್ನು ನೋಡಬಹುದಾಗಿದೆ. ತಮ್ಮ ತಮ್ಮ ಕಸುಬಿಗನುಗುಣವಾಗಿ ಹೆಸರು ಪಡೆದಿದ್ದಾರೆ. ಈ ವೃತ್ತಿಧರ್ಮದಲ್ಲಿ ಮುಖ್ಯವಾಗಿ ಪುರುಷರಿಗೆ ಕುಲಕಸುಬಿನಲ್ಲಿ ಮಹಿಳೆಯು ಸಹಾಯಕವಾಗಿ ಇಲ್ಲವೇ ತನಗೆ ತಿಳಿದಂತಹ ಕೌಶಲ್ಯದಿಂದ ಮಹಿಳೆಯು ಗೃಹ ಕಸುಬುಗಳಲ್ಲಿ ತೊಡಗುತ್ತಿದ್ದಾಳೆ. ಈ ಕಸುಬುಗಳೇ ಗುಡಿ ಕೈಗಾರಿಕೆಗಳಾಗಿ ಕಂಡುಬರುತ್ತವೆ.

ಮಹಿಳೆಯು ತನ್ನ ವೈಯಕ್ತಿಕ ಜೀವನದ ಅವಶ್ಯಕತೆಗಳ ಜೊತೆಗೆ ಸಾಂಪ್ರದಾಯಿಕ ಗುಡಿ ಕೈಗಾರಿಕೆಗಳಲ್ಲಿ ಆರ್ಥಿಕ ಬೆಳವಣಿಗೆಯನ್ನು ಬಲಪಡಿಸಿಕೊಳ್ಳುತ್ತಿದ್ದಾಳೆ. ಮಹಿಳೆ ಇಂತಹ ಪ್ರತಿಯೊಂದು ಹಂತದಲ್ಲೂ ಕುಟುಂಬದ ಜೀವನಾವಶ್ಯಕ ದುಡಿಮೆಯ ಜೊತೆಗೆ ಹೆಚ್ಚು ಕಡಿಮೆ ಉತ್ಪಾದನಾ ಹಾಗೂ ಕರಕುಶಲ ಕ್ಷೇತ್ರದಲ್ಲೂ ಸಮಾನಾಂತರವಾಗಿ ದುಡಿದಿದ್ದಾಳೆ. ಇದಕ್ಕೆ ಮುಖ್ಯವಾಗಿ ಸ್ಥಳೀಯ ಪ್ರದೇಶಗಳು ಹಾಗೂ ಹತ್ತಿರದ ಮಾರುಕಟ್ಟೆಗಳು ಸಹಾಯಕವಾದವು. ಪ್ರಚಲಿತ ಸಾಂಪ್ರದಾಯಿಕ

ವಿಧಾನದಿಂದ ಮಹಿಳೆಯರ ಆರ್ಥಿಕ ಸ್ಥಿತಿಯೂ ಉತ್ತಮಗೊಂಡಿತು. ಸ್ಥಳೀಯ ಮಾರುಕಟ್ಟೆಗಳು, ಬಳಕೆದಾರರು, ಗ್ರಾಹಕರನ್ನು ಗಳಿಸಿಕೊಂಡಿತು. ಇದೇ ಸಮಯದಲ್ಲಿ ಮಾನವ ಪರಿಶ್ರಮಕ್ಕೆ ಬದಲಾಗಿ ಯಂತ್ರಗಳು ಬಳಸಲ್ಪಟ್ಟಾಗ ಈ ತಾಂತ್ರಿಕತೆಯಿಂದಾಗ ಮಹಿಳೆಯರ ದುಡಿಮೆಗೆ ಆರ್ಥಿಕ ಚಟುವಟಿಕೆಗಳ ಸಹಭಾಗಿತ್ವ ಕೈ ಕೊಡಲಿ ಪೆಟ್ಟು ಬಿದ್ದಂತಾಗುತ್ತದೆ. ಇದರಿಂದಾಗಿ ಮಹಿಳೆಯು ಕಡಿಮೆಯಾಗಿ ಮನೆಯಲ್ಲಿ ದಾಸಿಯಾಗಿ ಗಂಡ ಹೇಳಿದಂತೆ ಕೇಳಿಕೊಂಡು ಬಿದ್ದಿರುವ ಪರಿಸ್ಥಿತಿಯು ಉಂಟಾಗಿದೆ. ಮಹಿಳೆಯರು ಗುಡಿಕೈಗಾರಿಕೆಗಳಲ್ಲಿ ಅಭಿವೃದ್ಧಿ ಹೊಂದಬೇಕಾದರೆ ಮೊದಲನೆಯದಾಗಿ ಕೌಟುಂಬಿಕ ಸಹಕಾರ ಬೇಕು. ನಂತರ ಸಮಾಜದಲ್ಲಿ ಬದುಕಲು ಅವಳು ಆರ್ಥಿಕವಾಗಿ ಸಧೃಡ ಹೊಂದಬೇಕಾಗಿದೆ. ಎಲ್ಲ ರೀತಿಯ ಜವಾಬ್ದಾರಿಗಳು, ಕರ್ತವ್ಯಗಳು, ವ್ಯವಹಾರಗಳು ಮಹಿಳೆಯೇ ನಡೆಸಿಕೊಂಡು ಹೋಗುವಂತೆ ಅವಳಿಗೆ ಎಲ್ಲ ರಂಗಗಳಲ್ಲಿ ಪ್ರಾಮುಖ್ಯತೆ ದೊರೆಯಬೇಕಾಗಿದೆ.

ಗುಡಿಕೈಗಾರಿಕೆಗಳಲ್ಲಿ ಮುಖ್ಯವಾಗಿ ಕೌದಿ ತಯಾರಿಕೆ, ಚರ್ಮಕೈಗಾರಿಕೆ, ಕುಂಬಾರಿಕೆಗಳಲ್ಲಿ ಕಂಡುಬರುವಂಥಹ ಮಹಿಳೆಯರ ಆರ್ಥಿಕ ಸ್ಥಿತಿ, ಸಾಮಾಜಿಕ ಸ್ಥಿತಿ, ಸಾಂಪ್ರದಾಯಿಕ ಕೌಶಲ್ಯಗಳ ಬಗ್ಗೆ ಸೂಕ್ಷ್ಮವಾಗಿ ಅಧ್ಯಯನ ಮಾಡಬೇಕಾಗಿದೆ.

**೧.೨ ಅಧ್ಯಯನದ ಉದ್ದೇಶ:**

ಮಹಿಳಾ ಆರ್ಥಿಕತೆಯಲ್ಲಿನ ವಿವಿಧ ಮೂಲಗಳಲ್ಲಿ ಗುಡಿಕೈಗಾರಿಕೆಗಳೂ ಕೂಡ ಒಂದಾಗಿವೆ. ಮಹಿಳೆಯರು ಸ್ವತಂತ್ರವಾಗಿ ಅಭಿವೃದ್ಧಿ ಹೊಂದಲು ತಮ್ಮ ಬುದ್ಧಿಶಕ್ತಿಯಿಂದ ತಮ್ಮ ವೃತ್ತಿ ಕೌಶಲ್ಯವನ್ನು ಅವಲಂಬಿಸಿ ದುಡಿಯಲು ಪ್ರಾರಂಭಿಸಿದ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರು ತಮ್ಮ ಶ್ರಮಶಕ್ತಿಯನ್ನು ತೊಡಗಿಸಿಕೊಳ್ಳುವಲ್ಲಿ ಮೊದಲ ಸ್ಥಾನದಲ್ಲಿದ್ದಾರೆ. ಇಂಥಹ ಗುಡಿಕೈಗಾರಿಕೆಗಳಲ್ಲಿನ ಮಹಿಳೆಯರ ಸ್ಥಾನಮಾನ ಗುರುತಿಸುವಿಕೆಯಿಂದ ಮಾನವನ ಅಭಿವೃದ್ಧಿಗೆ ಪೂರಕವೆಂಬಂತೆ ಬದಲಾವಣೆ ಹೊಂದುವ ಕೌಟುಂಬಿಕ ಆದಾಯ, ರಾಷ್ಟ್ರೀಯ ಆದಾಯ ಇವುಗಳಿಂದ ಬಡತನದ ಪ್ರಮಾಣ ಮತ್ತು ನಿರುದ್ಯೋಗ ಪ್ರಮಾಣವನ್ನು ಸ್ವಲ್ಪಮಟ್ಟಿಗಾದರೂ ನಿವಾರಿಸಲು ಸಾಧ್ಯವಾಗುತ್ತಿದೆ.

ಆಧುನೀಕರಣ, ತಂತ್ರಜ್ಞಾನ, ಜಾಗತೀಕರಣ ಇವುಗಳ ಪ್ರಭಾವದಿಂದ ಗುಡಿಕೈಗಾರಿಕೆಗಳು ಆರ್ಥಿಕವಾಗಿ ಅನೇಕ ಸಮಸ್ಯೆ ಮತ್ತು ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಈ ಕೈಗಾರೀಕರಣ, ಜಾಗತೀಕರಣಗಳ ಪ್ರಭಾವದಿಂದ ಗುಡಿಕೈಗಾರಿಕೆಗಳಿಗೂ ಕರಕುಶಲ ಕಲೆಗಳಿಗೂ ದಕ್ಕೆ ಬಂದೊದಗಿದೆ. ಇವುಗಳಿಂದ ಎಷ್ಟೋ ಕುಟುಂಬಗಳು ಬಡತನದಿಂದ ನರಳುತ್ತಿರುತ್ತಾರೆ. ಹಸಿವೆ, ಬಡ್ಡಿ ಇನ್ನಿತರೆ

ಎಲ್ಲ ರೀತಿಯ ಮೂಲಭೂತ ಸೌಕರ್ಯಗಳಿಂದಲೂ ಕೂಡ ಜನರು ಬಲಿಯಾಗುವಂತಹ ಸಂದರ್ಭಗಳು ಬಂದೊದಗಿವೆ. ಜೊತೆಗೆ ಹೆಚ್ಚಾಗಿ ಮಹಿಳೆಯರೇ ಈ ಕಷ್ಟಕಾರ್ಪಣ್ಯಗಳಿಗೆ ಬಲಿಯಾಗುತ್ತಿದ್ದಾರೆ ಎಂದು ತಿಳಿದುಕೊಳ್ಳಬೇಕಾದ ವಿಷಯವಾಗಿದೆ.

ಇಲ್ಲಿ ಉತ್ಪಾದನಾ ನೈಪುಣ್ಯತೆಯ ವಸ್ತುಗಳ ಬೆಲೆ, ಮಾರುಕಟ್ಟೆಗಳು ಸಮಸ್ಯೆಯಿಂದ ಸಾವಿರಾರು ಮಹಿಳೆಯರು ದಿನವಿಡೀ ದುಡಿದರೂ ಗುಡಿಕೈಗಾರಿಕೆಯಿಂದ ಉತ್ತಮ ಜೀವನವನ್ನು ನಡೆಸಲು ಅಸಾಧ್ಯವಾಗಿರುವುದು ದುರಾದೃಷ್ಟಕರ ಸಂಗತಿಯಾಗಿದೆ.

ಅನಾದಿ ಕಾಲದಿಂದಲೂ ನಡೆದುಕೊಂಡು ಬಂದಂಥ ಈ ಗುಡಿಕೈಗಾರಿಕೆಗಳು ಮಹಿಳೆಯರ ಸ್ಥಾನಮಾನಗಳು ಉತ್ಪಾದನೆಯಲ್ಲಿ ಮಹಿಳೆಯರ ಪಾತ್ರ, ಈ ಕೈಗಾರಿಕೆಗಳಿಂದ ಬರುವಂಥ ಸಂಸ್ಕೃತಿಗಳು ಬಹಳ ಪ್ರಾಮುಖ್ಯತೆಯನ್ನು ಹೊಂದಿದವಾಗಿವೆ. ಇದರಿಂದ ಎಷ್ಟೋ ಕುಟುಂಬಗಳು ಗುಡಿಕೈಗಾರಿಕೆಗಳಿಂದ ತಮ್ಮ ಜೀವನಾಧಾರವನ್ನು ಸಹ ರೂಪಿಸಿಕೊಂಡಿವೆ ಎಂದು ಹೇಳಬಹುದು. ಈ ರೀತಿಯಾಗಿ ಬೆಳೆದುಬಂದಂಥ ಗುಡಿಕೈಗಾರಿಕೆಗಳು ಪ್ರಸ್ತುತ ಸ್ಥಿತಿಯಲ್ಲಿ ಸಂಪೂರ್ಣವಾಗಿ ಸೆಣೆಸುವಂಥಹ ಹಂತವನ್ನು ತಲುಪಿವೆ. ಈ ಜಾಗತೀಕರಣ, ಆಧುನೀಕರಣ, ಖಾಸಗೀಕರಣ ಇವುಗಳ ಗುಡಿಕೈಗಾರಿಕೆಗಳನ್ನು ಬುಡಮೇಲು ಮಾಡಿ ತೋರಿಸುವಷ್ಟು ಮಟ್ಟಕ್ಕೆ ಇಂದು ಬೆಳೆದು ನಿಂತಿವೆ. ಇದನ್ನೇ ನಂಬಿಕೊಂಡು ಬದುಕುತ್ತಿರುವ ಕುಟುಂಬಗಳು ಉದ್ಯೋಗವಿಲ್ಲದೇ, ಆದಾಯವಿಲ್ಲದೆ ಆರ್ಥಿಕ ಪರಿಸ್ಥಿತಿಯನ್ನು ಹದಗೆಡೆಸಿಕೊಂಡು ಜೀವಿಸುವಂತಾಗಿದೆ. ಈಗಲೂ ಕೂಡ ಗುಡಿ ಕೈಗಾರಿಕೆಗಳಿಂದಲೇ ಜೀವನ ನಡೆಸುವಂತಹ ಅನೇಕ ಉದಾಹರಣೆಗಳನ್ನು ನಾವು ನೋಡಬಹುದು.

ಈ ಅಧ್ಯಯನವು ಬಳ್ಳಾರಿ ಜಿಲ್ಲೆಯಲ್ಲಿನ ಹೊಸಪೇಟೆ ತಾಲ್ಲೂಕು ಮತ್ತು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಮಹಿಳೆಯರ ಆರ್ಥಿಕ ಸ್ಥಾನಮಾನ, ಸಾಮಾಜಿಕ ಸ್ಥಾನಮಾನಗಳು, ಧಾರ್ಮಿಕ ಸ್ಥಾನಮಾನಗಳು, ಲಿಂಗ ತಾರತಮ್ಯಗಳುನ್ನು ಅಳಿಯಲು ಸಹಾಯಕವಾಗಿದೆ. ಇಂದಿನ ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ಅವರು ಎದುರಿಸುತ್ತಿರುವ, ಅವರ ಮುಂದೆ ನಿಂತ ಸವಾಲುಗಳು ಈ ಎಲ್ಲಾ ಪ್ರಶ್ನೆಗಳ ಹಿನ್ನೆಲೆಯೊಂದಿಗೆ ಗುಡಿಕೈಗಾರಿಕೆಗಳ ತಯಾರಿಕೆಯಲ್ಲಿನ ಒಟ್ಟು ಸಮುದಾಯದ ಉತ್ಪನ್ನದೊಂದಿಗೆ, ಜೀವನ ಕ್ರಮ, ಕುಟುಂಬ ವ್ಯವಸ್ಥೆ, ಅಲ್ಲಿನ ಆರ್ಥಿಕ, ಸಾಮಾಜಿಕ, ಸಮಸ್ಯೆಗಳನ್ನೇ ಪರಿಹಾರಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ೧.೩ ಅಧ್ಯಯನದ ಮಹತ್ವ:

ಗುಡಿ ಕೈಗಾರಿಕೆಗಳು ನಮ್ಮ ದೇಶದ ಆರ್ಥಿಕ ಸುಧಾರಣೆ ಹಾಗೂ ಬಡಕುಟುಂಬಗಳ ಉದ್ಧಾರದ ಪ್ರತಿಬಿಂಬವಾಗಿ ಪ್ರಾಚೀನ ಕಾಲದಿಂದಲೂ ಉಳಿದುಕೊಂಡು ಬಂದಿವೆ. ಆದರೆ ಇಂದಿನ ಪರಿಸ್ಥಿತಿಯನ್ನು ಅವಲೋಕಿಸಿದರೆ ಗುಡಿಕೈಗಾರಿಕೆಗಳು ದಿಕ್ಕು ಕಾಣದ ದೆಶೆಯಲ್ಲಿ ನಶಿಸಿಹೋಗುತ್ತಿರುವ ಕುಟುಂಬಗಳನ್ನು ಕಾಣುತ್ತೇವೆ. ಆದರೆ ಅವರಿಗೆ ಬೇರೆ ಯಾವುದೇ ದಾರಿಯಿಲ್ಲದೆ ಬೃಹತ್ ಕೈಗಾರಿಕೆಗಳಲ್ಲಿ ಕೂಲಿ ಆಳುಗಳಾಗಿ ದುಡಿಯುವ ಸಂದರ್ಭ ಬಂದೊದಗಿದೆ ಎಂದು ಹೇಳಬಹುದಾಗಿದೆ. ಆದರೆ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರ ಪಾತ್ರ ಪ್ರಮುಖವಾಗಿದ್ದರೂ ಪುರುಷರ ಅತಿಕ್ರಮಣದ ಪ್ರಾಬಲ್ಯದಿಂದ ಮಹಿಳೆಯರ ಸ್ಥಾನಮಾನಕ್ಕೆ ಯಾವುದೇ ಸ್ಥಾನಮಾನಗಳು ಇನ್ನೂ ಕೂಡ ಸಿಕ್ಕಿಲ್ಲವಾಗಿವೆ. ಗುಡಿಕೈಗಾರಿಕೆಗಳನ್ನು ಪತ್ರಿಕೆಗಳಲ್ಲಿ ಮಾತ್ರ ನೋಡುತ್ತೇವೆ. ಆದರೆ ದುರಂತದ ಸಂಗತಿಯೆಂದರೆ ಮಹಿಳೆಯರಿಂದಲೇ ನಡೆಯುವ ಗುಡಿಕೈಗಾರಿಕೆಗಳು ವಿನಾಶದ ಅಂಚಿನಲ್ಲಿವೆ ಎಂದು ಮಾತ್ರ ಗುರುತಿಸುತ್ತಾರೆ.

ಮಹಿಳೆಯರ ಸ್ವ–ಹಿತಾಸಕ್ತಿಯ ಆಲೋಚನೆಗಳು ಪುರುಷರ ಅಂಕೆಯಲ್ಲಿರುವುದರಿಂದ ಮಹಿಳೆಯರನ್ನು ಶೋಷಣೆಗೆ ಈಡುಮಾಡಿದ್ದು ಕಂಡುಬರುತ್ತದೆ. ಲಿಂಗ ತಾರತಮ್ಯದ ಬೇರುಗಳು ಸಾಮಾಜಿಕ ವ್ಯವಸ್ಥೆಯಲ್ಲಿ ನೆಲೆ ನಿಂತುಬಿಟ್ಟಿರುವುದರಿಂದ ಗುಡಿಕೈಗಾರಿಕೆಗಳಲ್ಲಿನ ಮಹಿಳೆಯರ ಸ್ಥಾನಮಾನಗಳು ಕುಂಠಿತವಾಗಿರುವುದು ಕಂಡುಬರುತ್ತಿದೆ. ಈ ದಿಕ್ಕಿನಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಗುರುತಿಸುವುದು ಬಹು ಕ್ಲಿಷ್ಟಕರವಾದ ಸಂಗತಿಯಾಗಿದೆ. ಶಿಕ್ಷಣ, ಆದಾಯ, ದುಡಿಮೆ, ಕುಟುಂಬದಲ್ಲಿಯ ಸ್ಥಾನಮಾನಗಳು ಒಟ್ಟಾರೆಯಾಗಿ ಗುಡಿಕೈಗಾರಿಕೆಗಳು ಮಹಿಳೆಯ ಪಾತ್ರವನ್ನು ಗುರುತಿಸುವುದು ಅಧ್ಯಯನ ಮಹತ್ವವಾಗಿದೆ.

## ೧.೪ ಅಧ್ಯಯನದ ವ್ಯಾಪ್ತಿ:

'ಗುಡಿ ಕೈಗಾರಿಕೆಗಳಲ್ಲಿ ಮಹಿಳಾ ಬದುಕು' ಎಂಬ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯ ಹೊಸಪೇಟ ತಾಲ್ಲೂಕು ಹಾಗೂ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕುಗಳನ್ನು ಅಧ್ಯಯನ ಕ್ಷೇತ್ರವನ್ನಾಗಿ ಆಯ್ಕೆಮಾಡಿಕೊಂಡಿದ್ದೇನೆ. ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳು ಹೈದಾರಾಬಾದ್ ಕರ್ನಾಟಕ ಹಿಂದುಳಿದ ಪ್ರದೇಶದಲ್ಲಿನ ಜಿಲ್ಲೆಗಳಾಗಿವೆ. ಇಲ್ಲಿ ಹಲವಾರು ಗುಡಿಕೈಗಾರಿಕೆಗಳು ನೆಲೆನಿಂತಿವೆ.

ಪ್ರಸ್ತುತದಲ್ಲಿ ಬಳ್ಳಾರಿ ಜಿಲ್ಲೆಯ ಕಂಪ್ಲಿ ಪಟ್ಟಣವನ್ನು ಅಧ್ಯಯನ ಕ್ಷೇತ್ರವನ್ನಾಗಿ ಸೀಮಿತಗೊಳಸಿಕೊಂಡಿದ್ದೇನೆ. ಇಲ್ಲಿನ ಗುಡಿ ಕೈಗಾರಿಕೆಗಳಲ್ಲಿ ಮಹಿಳೆಯರೇ ಹೆಚ್ಚಾಗಿ ಅವಲಂಬಿತರಾಗಿದ್ದಾರೆ. ಇಲ್ಲಿನ ಮಹಿಳೆಯರು ಎಲ್ಲಾ ಜಾತಿ ವರ್ಗಕ್ಕೆ ಸೇರಿದವರಾಗಿದ್ದಾರೆ. ಹೀಗಾಗಿ ಅವರವರ ವರ್ಗಜಾತಿ ಹಿನ್ನೆಲೆಗನುಗುಣವಾಗಿ ಬಂದಿದ್ದ ಹಿನ್ನೆಲೆಯಲ್ಲಿ ೪೦ ಮಹಿಳಾ ಕಾರ್ಮಿಕರನ್ನು ಆಯ್ಕೆ ಮಾಡಿಕೊಂಡು ವಿವಿಧ ಗುಡಿಕೈಗಾರಿಕೆಗಳನ್ನು ಇಲ್ಲಿ ವಿವರಿಸಲಾಗಿದೆ. ಹಲವಾರು ಗುಡಿಕೈಗಾರಿಕೆಗಳಿದ್ದು, ಅವುಗಳಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಮುಖ್ಯವಾಗಿ ಚಮ್ಮಾರಿಕೆ, ಕೌದಿ ಎಣಿಕೆ, ಕುಂಬಾರಿಕೆ ಈ ಗುಡಿಕೈಗಾರಿಕೆಗಳನ್ನು ನನ್ನ ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ಈ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರ ಪಾತ್ರ ಕೌಟುಂಬಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ, ಜಾತಿವಾರು ಇನ್ನಿತರ ವಿಷಯನ್ನಿಟ್ಟುಕೊಂಡು, ಹಲವಾರು ಪ್ರಶ್ನೆಗಳನ್ನು ರಚಿಸಿ ಸಂದರ್ಶನ ಸೂಚಿಯ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಪುರುಷರಿಗೆ ಸಮನಾಗಿ ಮಹಿಳೆ ದುಡಿಯುತ್ತಿದ್ದಾಳೆ. ಆದರೆ ಅವಳಿಗೆ ಆರ್ಥಿಕ ಸ್ವಾವಲಂಬನೆ ಇಲ್ಲದಿರುವುದು ಕಂಡುಬರುತ್ತದೆ. ಈ ಸಂಶೋಧನೆಗೆ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕು ಹಾಗೂ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕುಗಳನ್ನು ಕೇಂದ್ರವಾಗಿಟ್ಟುಕೊಂಡು ಪ್ರಮುಖವಾಗಿ ಈ ಗುಡಿಕೈಗಾರಿಕೆಗಳ ದುಡಿಮೆಯು ಮಹಿಳೆಯರ ಬದುಕಿನ ರೀತಿಯ ಮಾಪನ ಮಾಡುವ ಆಗಿತ್ತು ಇರುವುದರಿಂದ ನಿರ್ಧಿಷ್ಟವಾದ ವ್ಯಾಪ್ತಿಯನ್ನು ಹಾಕಿಕೊಳ್ಳಲಾಗಿದೆ.

**೧.೫ ಅಧ್ಯಯನದ ವೈಧಾನಿಕತೆ**

ಒಂದು ಸಂಶೋಧನೆಯನ್ನು ಕೈಗೊಂಡಾಗ ಅದಕ್ಕೆ ತನ್ನದೇ ಆದ ಸಂಶೋಧನಾ ವಿಧಾನವನ್ನು ಒಳಗೊಂಡಿರುತ್ತದೆ. ಈ ಅಧ್ಯಯನದಲ್ಲಿ ಗುಡಿಕೈಗಾರಿಕೆಗಳಲ್ಲಿನ ಮಹಿಳೆಯರ ಮಾಹಿತಿಯನ್ನು ತಿಳಿದುಕೊಳ್ಳಲು ಸೂಕ್ತ ವಿಧಾನಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕನ್ನು ಅರಿಯಲು ಸಾಂಪ್ರದಾಯಿಕ ವಿಧಾನಗಳನ್ನು ಪ್ರಶ್ನಾವಳಿ, ಅವಲೋಕನ, ಸಂದರ್ಶನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ವ್ಯಕ್ತಿ ನಿಷ್ಠತೆ, ಅನುಭವಾಧಾರಿತ ವಿಶ್ಲೇಷಣೆಯನ್ನು ಅಳವಡಿಸಿಕೊಳ್ಳಲಾಗಿದೆ. ಗುಡಿಕೈಗಾರಿಕೆಗಳಲ್ಲಿ ಮಹಿಳೆಯರ ಬದುಕಿನ ಸವಿವರವಾದ ಚಿತ್ರಣ ತರೆದಿಡುವಲ್ಲಿ ಈ ವಿಧಾನಗಳು ಮಹತ್ವದ ಪಾತ್ರವಹಿಸುತ್ತವೆ.

**೧.೫.೧ ಸಿದ್ಧಾಂತದ ಸ್ವರೂಪ**

ಗುಡಿಕೈಗಾರಿಕೆಗಳಲ್ಲಿ ಮಹಿಳೆಯರು ಮುಖ್ಯ ಕೇಂದ್ರಬಿಂದುವಾಗಿ ಕಾರ್ಯನಿರ್ವಹಣೆ ಮಾಡುತ್ತಿರುತ್ತಾರೆ. ಇವರು ಅಸಂಘಟಿತ ವಲಯದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಈ ಗುಡಿ ಕೈಗಾರಿಕೆಯಲ್ಲಿನ ಮಹಿಳೆಯರ ಅಭಿವೃದ್ಧಿ ಚಿಂತನೆಯ ಹಿತ ಚಿಂತನೆಯ ದೃಷ್ಟಿಯಿಂದ ಮಹಿಳೆಯ ದುಡಿಮೆಯ ಅಭಿವೃದ್ಧಿ ಮೀಮಾಂಸೆಯನ್ನು ಈ ಅಧ್ಯಯನದಲ್ಲಿ ಕಟ್ಟಿಕೊಡಲಾಗಿದೆ. ಇಲ್ಲಿ ಮಹಿಳಾ ಶ್ರಮವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಮಹಿಳೆಯ ಸಬಲೀಕರಣದ ಬಗ್ಗೆ ಹೆಚ್ಚಿನ ಒತ್ತನ್ನು ಕೊಡಲಾಗಿದೆ. ಮಹಿಳೆಯರು ಆಧುನಿಕತೆಯ ಕತ್ತಲಲ್ಲಿ ಅವರ ಕೈಗಾರಿಕೆಗಳು ಯಾವ ರೀತಿಯಾಗಿ ಅವನತಿ ಹೊಂದುತ್ತಿವೆ ಇದರಿಂದ ಮಹಿಳೆಯ ಅನಭಿವೃದ್ಧಿಯ ಸ್ಥಿತಿಯಲ್ಲಿ ಹೇಗೆ ನಲುಗಿ ಹೋಗಿದ್ದಾಳೆ ಎಂದು ಈ ನನ್ನ ಸಂಶೋಧನೆಯಲ್ಲಿ ವಿವರಿಸಲಾಗಿದೆ.

**೧.೫.೨ ಕ್ಷೇತ್ರಕಾರ್ಯದ ಮೂಲಕ ಮೂಲ ಆಕರಗಳ ಸಂಗ್ರಹಣೆ**

**ಪ್ರಶ್ನಾವಳಿ:** ಸಂಶೋಧನೆಯಲ್ಲಿ ಕೆಲವು ಮಾಹಿತಿಗಳನ್ನು ತಿಳಿದುಕೊಳ್ಳಲು ಪ್ರಶ್ನಾವಳಿಯು ತುಂಬಾ ಪ್ರಮುಖವಾದ ಪಾತ್ರವನ್ನು ವಹಿಸುತ್ತಿದೆ ಎಂದು ಹೇಳಬಹುದಾಗಿದೆ. ಒಂದು ಸಂಶೋಧನೆಯ ನಿರ್ಧಿಷ್ಟ ವಿಷಯದ ಸುತ್ತ ಹೆಣೆದಿರುವ ಪ್ರಶ್ನೆಗಳ ಸರಣಿಯೇ ಪ್ರಶ್ನಾವಳಿಯಾಗಿರುತ್ತದೆ. ಪೂರ್ವಭಾವಿಯಾಗಿ ಸಿದ್ಧಪಡಿಸಲಾದ ಪ್ರಶ್ನಾವಳಿಗಳೊಂದಿಗೆ ವಕ್ತೃಗಳನ್ನು ಸಂದರ್ಶಿಸುವುದು, ಪ್ರಶ್ನೆಗಳನ್ನು ರಚಿಸದೇ ಪ್ರಶ್ನಾವಳಿಗಳ ಅವಶ್ಯಕತೆಗೆ ತಕ್ಕಂತೆ ಹೊಂದಿಕೊಳ್ಳುವ ಪ್ರಶ್ನೆಗಳನ್ನು ಕೇಳಿ ಮಾಹಿತಿ ಪಡೆಯುವ ಮಾರ್ಗವಾಗಿರುತ್ತದೆ. ಈ ರೀತಿಯ ಎರಡು ವಿಧಗಳಾಗಿ ಪ್ರಶ್ನಾವಳಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಸಂದರ್ಶನ: ಸಂಶೋಧನೆಯಲ್ಲಿ ಹೆಚ್ಚಿನ ಮಾಹಿತಿ ಸಂಗ್ರಹಣೆಗಾಗಿ ವ್ಯಾಪಕವಾಗಿ ಬಳಸಲ್ಪಡುವ ಒಂದು ಸಂಶೋಧನಾ ವಿಧಾನವಾಗಿದೆ. ಸಂದರ್ಶನವು ಸಂದರ್ಶಕ ಮತ್ತು ಸಂದರ್ಶನಕ್ಕೆ ಒಳಗಾಗುವವನ ನಡುವಿನ ಒಂದು ಪ್ರತಿಫಲವಾಗಿ ಸಂದರ್ಶನವು ಮೂಡಿಬರುತ್ತದೆ. ಇದರಲ್ಲಿ ಗಲುಡಿಕೈಗಾರಿಕೆಗಳ ಮಹಿಳೆಯರ ಎಲ್ಲ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ. ಇಲ್ಲಿ ರಚಿತ ಮತ್ತು ಅರಚಿತ ಪ್ರಶ್ನೆಗಳನ್ನು ಬಳಸಲಾಗಿದೆ. ರಚಿತ ಪ್ರಶ್ನೆಗಳ ಕೈಪಿಡಿಯನ್ನು ಬಳಸಲಾಗಿದೆ. ಈ ಪ್ರಶ್ನೆಗಳನ್ನು ಮಹಿಳೆಯರಿಗೆ ಕೇಳಿ ಅವರಿಂದ ಮೌಖಿಕವಾಗಿ ಉತ್ತರಗಳನ್ನು ಪಡೆದುಕೊಳ್ಳಲಾಗಿದೆ. ಕೆಲವು ಸಂದರ್ಭದಲ್ಲಿ ಅಲ್ಲಿಯೂ ಅರಚಿತ ಪ್ರಶ್ನೆಗಳನ್ನು ಸೃಷ್ಟಿಸಿಕೊಂಡು ಸಂದರ್ಶನವನ್ನು ಮಾಡಲಾಗಿದೆ.

ಅನುಷಂಗಿಕ ಆಕರಗಳ ಮಾಹಿತಿ ಸಂಗ್ರಹಣೆ: ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು

ಅಧ್ಯಯನವನ್ನು ಮಾಡುತ್ತಿರುವಾಗ ಮೂಲ ಆಕರಗಳ ಜೊತೆಗೆ ಅನುಷಂಗಿಕ ಆಕರಗಳನ್ನು ಗಣನೆಗೆ ತೆಗೆದುಕೊಂಡು, ಅಧ್ಯಯನಕ್ಕಾಗಿ ಹಲವಾರು ಸಂಶೋಧಕರು ಸಂಶೋಧನೆ ಮಾಡಿದ ಸಂಶೋಧನಾ ಸಂಪ್ರಬಂಧಗಳು, ಲೇಖಕರುಗಳು ಬರೆದ ಲೇಖನಗಳು, ಪುಸ್ತಕಗಳು ಇನ್ನು ನಮ್ಮ ಅಧ್ಯಯನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳ ಬಗ್ಗೆ ಈ ಹಿಂದೆ ಅಧ್ಯಯನಗಳನ್ನು ಕೈಗೊಂಡ ಸಂಶೋಧಕರ ಜೊತೆ ಚರ್ಚಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

# ಅಧ್ಯಾಯ ಎರಡು

## ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು : ಸ್ತ್ರೀವಾದಿ ನಿರ್ವಚನ

೨.೧ ಅಧ್ಯಯನದ ಚೌಕಟ್ಟು ಮತ್ತು ಸ್ಪಷ್ಟೀಕರಣ

೨.೨ ಗುಡಿಕೈಗಾರಿಕೆಗಳ ಸ್ವರೂಪ ವಿಶ್ಲೇಷಣೆ.

೨.೩ ಅಧ್ಯಯನಕ್ಕೆ ಆಯ್ಕೆಯಾದ ಗುಡಿಕೈಗಾರಿಕೆಗಳು

೨.೩.೧ ಚರ್ಮ ಕೈಗಾರಿಕೆಗಳು

೨.೩.೨ ಕೌದಿ ಹೆಣಿಕೆ ಮತ್ತು ಕಸೂತಿ ಕಲೆ

೨.೩.೩ ಕುಂಬಾರಿಕೆ

೨.೪ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರು – ಸ್ತ್ರೀವಾದಿ ನಿರ್ವಚನ

## ಅಧ್ಯಾಯ : ಎರಡು

# ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು : ಸ್ತ್ರೀವಾದಿ ನಿರ್ವಚನ

## ಪ್ರಸ್ತಾವನೆ

ಮನುಷ್ಯನು ಬಹಳ ಹಿಂದಿನ ಕಾಲದಿಂದಲೂ ದುಡಿಮೆಯ ವಿಷಯದಲ್ಲಿ ಸ್ತ್ರೀಪುರುಷರಿಬ್ಬರೂ ಜೊತೆಯಾಗಿ ದುಡಿಯುತ್ತಿದ್ದರು ಬೇಟೆಯಾಡಿಕೊಂಡು ಬರಲು ಪುರುಷ ಹೋದರೆ ಮಹಿಳೆಯು ಮನೆಯಲ್ಲಿದ್ದು ಕೊಂಡು ಮನೆಯಲ್ಲಿನ ಕೆಲಸ ಕಾರ್ಯಗಳನ್ನು ಮುಗಿಸಿ ನಂತರ ಅವನು ತಂದ ಮಾಂಸವನ್ನು ಬೇಯಿಸಿ ಅವನಿಗೂ ಕೊಟ್ಟು ಉಳಿದದ್ದು ತಾನು ತಿನ್ನುವುದು ವಾಡಿಕೆಯಾಗಿತ್ತು. ತದನಂತರ ಮಹಿಳೆಯೂ ಕೂಡ ಅವನ ಜೊತೆಯಲ್ಲಿ ಕಾಡಿಗೆ ಹೋಗಿ ಬೇಟೆಯಾಡುವುದನ್ನು ರೂಡಿಸಿಕೊಂಡಳು ಇವರು ಮಳೆ, ಬಿಸಿಲು, ಚಳಿಗಳಿಂದ ರಕ್ಷಣೆಯನ್ನು ಪಡೆಯಲು ಗುಡಿಸಲುಗಳನ್ನ ಕಟ್ಟಿಕೊಂಡು ಮಹಿಳೆ ತನ್ನ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಗೆಡ್ಡೆ ಗೆಣಸುಗಳನ್ನು ಬೆಳೆಯಲಾರಂಭಿಸಿದಳು. ಬೇಟೆಯಾಡುವುದನ್ನ ಕಡಿಮೆ ಮಾಡಿ ಜನಸಂಖ್ಯೆಯೂ ಹೆಚ್ಚಾದಂತೆ ಇತರ ಆಹಾರ ಬೆಳೆಗಳನ್ನು ಬೆಳೆಯಲಾರಂಭಿಸಿ ಕೃಷಿ ಪದ್ಧತಿಯು ಜಾರಿಗೆ ಬಂದಿತು ಮಾನವರು ಅಲೆಮಾರಿ ಜೀವನವನ್ನು ಬಿಟ್ಟು ಒಂದು ಕಡೆ ನೆಲೆಯೂರಲು ಪ್ರಾರಂಭಿಸಿದರು ಈ ಕಾರಣದಿಂದಲೇ ಕೃಷಿ ಪ್ರಾರಂಭವಾದದ್ದೇ ಮಹಿಳೆಯಿಂದ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಕೃಷಿಯ ಜೊತೆಗೆ ಪೂರಕವಾಗಿ ಪಶು ಸಂಗೋಪನೆಯನ್ನು ಪ್ರಾರಂಭಿಸಿದರು ಕೃಷಿಯು ಕುಟುಂಬದ ಮಿತಿಯನ್ನು ಮೀರಿ ಮಾರುಕಟ್ಟೆಗೆ ವಿಸ್ತೃತಗೊಂಡಹಾಗೆ ಪುರುಷ ಪ್ರಧಾನವಾಗಿ ಪರಿವರ್ತನೆಗೊಂಡಿತು ಯಾವಾಗ ಕೃಷಿಲಾಭ ಮಾರುಕಟ್ಟೆ ಮತ್ತು ವಾಣಿಜ್ಯ ಉದ್ದೇಶವನ್ನು ಹೊಂದಿತೋ ಆಗಿನಿಂದ ಸ್ತ್ರೀ ಪುರುಷರ ಕೃಷಿ ಕೆಲಸದ ನಡುವೆ ತಾರತಮ್ಯ ಸೃಷ್ಟಿಯಾಯಿತು

ದುಡಿಮೆಯ ಕಲ್ಪನೆ ಹುಟ್ಟಿಕೊಂಡಿತು. ಉಳುಮೆ ಮಾಡಿ ಕೃಷಿ ಉತ್ಪನ್ನಗಳನ್ನು ಲಾಭಕ್ಕಾಗಿ ಅಥವಾ ಇತರ ವಸ್ತುಗಳನ್ನು ಕೊಳ್ಳಲು ಮಾರುಕಟ್ಟೆಗೆ ಮಾರಾಟ ಮಾಡಿ ಆದಾಯ ತರುವ ಕೆಲಸವು ದುಡಿಮೆ ಎನಿಸಿಕೊಂಡರೆ ಸ್ತ್ರೀಯರು ಮಾಡುವ ಉಳಿದೆಲ್ಲ ಕ್ರಿಯೆಗಳು ಕರ್ತವ್ಯವೆಂದು ಅಥವಾ ಕೆಲಸವೆಂದು ಪರಿಗಣಿಸಲ್ಪಟ್ಟವು ಪುರುಷರು ಕೆಲಸಕ್ಕೆ ಹೆಚ್ಚು ಶಕ್ತಿ ಬೇಕು ಎಂಬ ನಿಲುವು ಹಾಗೂ ಕೃಷಿ ಉತ್ಪನ್ನಗಳ ಮಾರಾಟ ಹಣದ ವ್ಯವಹಾರದಿಂದ ಅವರ ದುಡಿಮೆಗೆ ಆದ್ಯತೆ ಮನ್ನಣೆಯು ದೊರೆಯಿತು ಆದರೆ ಸ್ತ್ರೀಯರು ಎಷ್ಟೇ ಅವಶ್ಯಕವಾದ ಹಾಗೂ ಶ್ರಮದಾಯಕ ಕೆಲಸಗಳನ್ನು ಮಾಡಿದರೂ ಅದಕ್ಕೆ ಹಣದ ವ್ಯವಹಾರದೊಂದಿಗೆ ನೇರ ಸಂಬಂಧವಿಲ್ಲದಿದ್ದುದರಿಂದ ನಗಣ್ಯವಾಯಿತು. ಅಗೋಚರ ವಾಯಿತು ನಂತರದ ದಿನಗಳಲ್ಲಿ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳು ಗೃಹ ಕೃಗಾರಿಕೆಗಳಿಂದ ಗುಡಿಕೈಗಾರಿಕೆಗಳು ಬೆಳೆಯಲಾರಂಭಿಸಿದರು ಇಲ್ಲಿಯೂ ಪುರುಷರು ಒಂದೆರಡು ಕೆಲಸಗಳನ್ನು (ಶ್ರಮದಾಯಕ ಕೆಲಸಗಳನ್ನು) ಮಾಡಿದರೆ ಹೆಚ್ಚಿನ ಕೆಲಸಗಳನ್ನು ಸ್ತ್ರೀಯರೇ ಮಾಡಿದರೂ ಉತ್ಪನ್ನದ ಸಾಗಣಿ ಮಾರಾಟ ಹಾಗೂ ಹಣದ ವ್ಯವಹಾರದ ಸಲುವಾಗಿ ಅವರು ಪ್ರಮುಖ ದುಡಿಮೆಗಾರರಾದರು ಸ್ತ್ರೀಯರು ಪೂರಕ ದುಡಿಮೆಗಾರರಾಗಿ ಪರಿಗಣಿಸಲ್ಪಟ್ಟರು ಆದರೂ ತಮ್ಮ ಅವಿರತ ದುಡಿಮೆ ಮತ್ತು ಕೊಡುಗೆಯಿಂದ ಕುಟುಂಬದಲ್ಲಿ ಅವ್ಯಕ್ತ ಉನ್ನತ ಸ್ಥಾನವನ್ನು ಪಡೆದಿದ್ದರು. ಇದನ್ನು ೧೮ನೇ ಶತಮಾನದ ಕೈಗಾರಿಕಾ ಕ್ರಾಂತಿ ಕಿತ್ತುಕೊಂಡಿತು ಸ್ತ್ರೀಯರು ಮನೆಯೊಳಗೆ ತಯಾರಿಸುತ್ತಿದ್ದ ವಸ್ತುಗಳನ್ನು ಕಾರ್ಖಾನೆಗಳು ಉತ್ಪಾದಿಸಲು ಪ್ರಾರಂಭಿಸಿದವು ಉದಾ:- ನೂಲುತೆಗೆಯುವುದು, ಬಟ್ಟೆಗಳನ್ನು ನೇಯುವುದು, ಆಹಾರ ಸಂಸ್ಕರಣೆ, ಬೀಜ, ಗೊಬ್ಬರ ಸಂಸ್ಕರಣೆ, ಇತ್ಯಾದಿ ವಸ್ತುಗಳ ತಯಾರಿಕೆಯಲ್ಲಿ ನಿಪುಣತೆ ಹೊಂದಿದ್ದರೂ ಕಾರ್ಖಾನೆಗಳಲ್ಲಿ ಉದ್ಯೋಗ ಪಡೆಯಲಾಗಲಿಲ್ಲವಾಗಿದೆ. ಕುಟುಂಬದ ಜವಾಬ್ದಾರಿ ಹಾಗೂ ಅವರ ಕಟ್ಟಿಹಾಕಲಾರಂಭಿಸಿದವು. ಇವುಗಳಿಂದ ಮುಕ್ತರಾಗಿದ್ದ ಪುರುಷರು ಕಾರ್ಖಾನೆಗಳಲ್ಲಿ ಕೆಲಸ ಪಡೆದು ಆದಾಯ ತರುವವರಾಗಿ ಕುಟುಂಬದ ಯಜಮಾನಿಕೆಯನ್ನು ಪಡೆದರು ವಸ್ತುಗಳನ್ನ ಪಡೆಯಲು ಸ್ತ್ರೀಯರು ಪುರುಷರನ್ನು ಆರ್ಥಿಕವಾಗಿ ಅವಲಂಬಿಸುವಂತಾಯಿತು. ಯೂರೋಪಿನಲ್ಲಿ ಕೈಗಾರಿಕಾ ಕ್ರಾಂತಿಯ ಪರಿಣಾಮವನ್ನು ಸ್ತ್ರೀವಾದಿ ದೃಷ್ಠಿ ಕೋನದಿಂದ ವಿಶ್ಲೇಷಿಸಿದಾಗ ಸಂಪೂರ್ಣವಾಗಿ ಭಿನ್ನ ಚಿತ್ರಣ ಕಂಡು ಬಂದಿತು ಸಾಮಾಜಿಕ ಉತ್ಪನ್ನದಿಂದ ಮಹಿಳೆಯರು ದೂರವಾದರು ಅದೇ ಅವರ ಶೋಷಣೆಗೆ ತುಳಿತಕ್ಕೆ ಹಾಗೂ ಜಂಡರ್ ತಾರತಮ್ಯಕ್ಕೆ ಕಾರಣವಾಯಿತು. ಎಂದು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಹೇಳುತ್ತಾರೆ.

## ೨.೧ ಅಧ್ಯಯನದ ಚೌಕಟ್ಟು ಮತ್ತು ಸ್ಪಷ್ಟೀಕರಣ

ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು ಬಹಳ ವಿಶಾಲವಾದಂಥ ಒಂದು ಚೌಕಟ್ಟನ್ನು ಒಳಗೊಂಡಿದೆ. ಗುಡಿಕೈಗಾರಿಕೆಗಳಲ್ಲಿ ದುಡಿದು ಜೀವನ ನಡೆಸುತ್ತಿರುವ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಮಹಿಳೆಯರು ಮತ್ತು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಮಹಿಳೆಯರನ್ನು ಪ್ರಸ್ತುತ ನನ್ನ ಅಧ್ಯಯನದ ಚೌಕಟ್ಟಿಗೆ ಒಳಪಡಿಸಿದ್ದೇನೆ. ಈ ಅಧ್ಯಯನ ಚೌಕಟ್ಟಿನಲ್ಲಿ ಮಹಿಳೆಯು ಚಮ್ಮಾರಿಕೆ, ಕೌದಿ ಎಣಿಕೆ, ಕಸೂತಿ, ಕುಂಬಾರಿಕೆ ಇನ್ನಿತರೆ ಸಣ್ಣ ಗುಡಿಕೈಗಾರಿಕೆಗಳಲ್ಲಿ ಮಹಿಳೆಯ ಪಾತ್ರವು ಎಷ್ಟಿದೆ ಎಂಬುದು ಇಲ್ಲಿ ನೋಡಬಹುದಾಗಿದೆ. ಈ ಸಂಶೋಧನೆಯಲ್ಲಿ ದುಡಿಯುವ ಮಹಿಳೆ ಆರ್ಥಿಕ ಜೀವನ, ಸಾಮಾಜಿಕ ಜೀವನ, ಸಾಂಪ್ರದಾಯಿಕ ಕೌಶಲ್ಯದ ಬದುಕನ್ನು ಈ ನನ್ನ ಸಂಶೋಧನೆಯಲ್ಲಿ ತೆರೆದಿಡುವ ಪ್ರಯತ್ನವನ್ನು ಮಾಡಿದ್ದೇನೆ. ಈ ಗುಡಿಕೈಗಾರಿಗಳು ಅವನತಿಯನ್ನು ಹೊಂದುತ್ತಿವೆಯಾದರೂ ಈ ಅಧ್ಯಯನದಲ್ಲಿ ಅವುಗಳ ಮಹತ್ವವನ್ನು ಹೇಳಲಾಗಿದೆ. ಇವು ಮದ್ಯಮ ವರ್ಗದ ಜನರಿಗೆ ಅವಶ್ಯಕ ವಸ್ತುಗಳು ಎನ್ನಬಹುದಾಗಿದೆ. ಈ ವಸ್ತುಗಳು ತೀರ ಶ್ರೀಮತಂತರು ಬಳಸುವುದಿಲ್ಲವಾಗಿದೆ. ಏಕೆಂದರೆ ಈಗಿನ ಆಧುನಕತೆಯಲ್ಲಿ ಗುಡಿಕೈಗಾರಿಕೆಗಳು ನಶಿಸುತ್ತಿವೆ ಎಂದು ಹೇಳಬಹುದಾಗಿದೆ.

ಗುಡಿ ಕೈಗಾರಿಕೆಗಳಲ್ಲಿ ಬರುವ ಮಹಿಳೆಯರ ಶ್ರಮ ಮತ್ತು ದುಡಿಮೆಯನ್ನು ಅಧ್ಯಯನ ಮಾಡುವುದು ದೊಡ್ಡ ವಲಯದಲ್ಲಿ ಕುಲಕಸುಬುಗಳನ್ನು ಆಧರಿಸಿ ಮಹಿಳೆಯರು ದುಡಿಯುವ ಬಗೆ. ಚಮ್ಮಾರಿಕೆ, ಕೌದಿ ಎಣಿಕೆ, ಕುಂಬಾರಿಕೆ, ಕಸೂತಿ ಕಲೆಯಲ್ಲಿ ಮಹಿಳೆ ಯಾವ ರೀತಿ ಭಾಗವಹಿಸುತ್ತಾಳೆ: ಇದರ ಪರಿಣಾಮಗಳೇನು ದುಸ್ಥಿತಿಗೆ ಕಾರಣಗಳೇನು ಎಂಬುದನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಗುಡಿಕೈಗಾರಿಕೆಯಲ್ಲಿನ ಮಹಿಳೆಯ ಶ್ರಮವನ್ನು ಕೆಲಸಕ್ಕೆ ಬಾರದಂತೆ ಮಾಡಿರುವುದರ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.

ಗುಡಿ ಕೈಗಾರಿಕೆಗಳಲ್ಲಿ ಹಲವಾರು ಗುಡಿಕೈಗಾರಿಕೆಗಳು ಕಂಡು ಬರುತ್ತವೆ. ಅದರಲ್ಲಿ ಮುಖ್ಯವಾಗಿ ನಾನು ನನ್ನ ಸೀಮತಿ ಅಧ್ಯಯನದ ಅವಧಿಯಲ್ಲಿ ಮಾಡುವ ನಾಲ್ಕು ಗುಡಿ ಕೈಗಾರಿಕೆಗಳ ಬಗ್ಗೆ ಅಧ್ಯಯನವನ್ನು ಕೈಗೊಂಡಿದ್ದೇನೆ. ಇಲ್ಲಿ ಗುಡಿ ಕೈಗಾರಿಕೆಗಳಲ್ಲಿ ಬದುಕು ನಡೆಸುತ್ತಿರುವ ಮಹಿಳೆಯರ ಸಮಸ್ಯೆಗಳು ಗುಡಿಕೈಗಾರಿಕೆಗಲ ಮಹಿಳೆಯರ ಶ್ರಮವನ್ನು ಮೂಲೆ ಗುಂಪಾಗಿ ಮಾಡಿರುವುದು ಕಂಡುಬರುತ್ತದೆ. ಇಲ್ಲಿ ಶ್ರಮಕ್ಕೆ ಪ್ರಾಶಸ್ತ್ಯವಿಲ್ಲವಾಗಿದೆ. ಅದರ ಬದಲಾಗಿ ತಂತ್ರಜ್ಞಾನಕ್ಕೆ ಹೆಚ್ಚಿನ ಒತ್ತನ್ನು

ಕೊಡಲಾಗುತ್ತಿದೆ. ಇದರಲ್ಲಿ ಸಾಮ್ರಾಜ್ಯಶಾಹಿ ಮುಕ್ತ ಮಾರುಕಟ್ಟೆಗಳ ಬಗ್ಗೆ ಸ್ಪಷ್ಟೀಕರಣದ ಅವಶ್ಯಕತೆಯಿದೆ, ಆದ್ದರಿಂದ ಈ ನಾಲ್ಕು ಗುಡಿಕೈಗಾರಿಕೆಗಳನ್ನು ಮುಖ್ಯವಾಗಿ ಮಹಿಳೆಯರನ್ನು ಕೇಂದ್ರವಾಗಿಸಿಕೊಂಡು ಈ ಅಧ್ಯಯನ ಮಾಡಲಾಗಿದೆ.

ಅಧ್ಯಯನಕ್ಕೆ ಆಯ್ದುಕೊಂಡ ಗುಡಿಕೈಗಾರಿಕೆಗಳು

೧. ಚರ್ಮ ಕೈಗಾರಿಕೆ
೨. ಕೌದಿ ಎಣಿಕೆ(ಕೌದಿ ಕೈಗಾರಿಕೆ)
೩. ಕಸೂತಿ ಕಲೆ
೪. ಕುಂಬಾರಿಕೆ

ಈ ಆಯ್ದ ಗುಡಿಕೈಗಾರಿಕೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಇದರಲ್ಲಿ ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನವನ್ನು ಕೈಗೊಂಡಿದ್ದೇನೆ. ಈ ಅಧ್ಯಯನವು ಮಹಿಳಾ ಪರ ದೃಷ್ಟಿಕೋನದಿಮದ ಮಾಡಿದ್ದೇನೆ. ಈ ಮೇಲ್ಕಂಡ ಗುಡಿಕೈಗಾರಿಕೆಗಳ ವಿಶಿಷ್ಟತೆಯನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದಾಗಿದೆ.

**೨.೨ ಗುಡಿ ಕೈಗಾರಿಕೆಗಳ ಸ್ವರೂಪ ವಿಶ್ಲೇಷಣೆ**

ಸುಮಾರು ೧೮ನೇ ಶತಮಾನದ ಹಿಂದಿನ ಕಾಲದಲ್ಲಿ ಕೃಷಿ, ಕೃಷಿಯೇತರಕ್ಕೆ ಸಂಬಂಧಿಸಿದಂತೆ ಗುಡಿಕೈಗಾರಿಕೆಗಳು ಬೆಳೆದವೆನ್ನಬಹುದು. ಇಲ್ಲಿ ಹೆಚ್ಚಿನ ಕೆಲಸಗಳು ಸ್ತ್ರೀಯರೇ ಮಾಡುವುದರಿಂದ ಉತ್ಪನ್ನದ ಸಾಗಣಿ, ಮಾರಾಟ ಹಾಗೂ ಹಣದ ವ್ಯವಹಾರದ ಸಲುವಾಗಿ ಅವರು ಪ್ರಮುಖ ದುಡಿಮೆಗಾರರಾದರೆ ಸ್ತ್ರೀಯರು ಪೂರಕ ದುಡಿಮೆಗಾರರಾಗಿ ಪರಿಗಣಿಸಲ್ಪಟ್ಟರು. ಆದರೂ ತಮ್ಮ ಅವಿರತ ದುಡಿಮೆ ಮತ್ತು ಕೊಡುಗೆಯಿಂದ ಕುಟುಂಬದಲ್ಲಿ ಆ ವ್ಯಕ್ತಿ ಉನ್ನತ ಸ್ಥಾನವನ್ನು ಪಡೆದಿದ್ದರು ಇದನ್ನು ೧೮ನೇ ಶತಮಾನದ ಕೈಗಾರಿಕಾ ಕ್ರಾಂತಿಯು ಕಿತ್ತುಕೊಂಡಿತು. ಮಹಿಳೆಯರು ಮನೆಯಲ್ಲಿ ಮಾಡುತ್ತಿದ್ದ ವಸ್ತುಗಳನ್ನು ಕಾರ್ಖಾನೆಗಳಲ್ಲಿ ಉತ್ಪಾದಿಸಲಾರಂಭಿಸಿದರು. ಮಹಿಳೆಯರ ಎಷ್ಟೇ ನಿಪುಣತೆಯನ್ನು ಹೊಂದಿದ್ದರೂ ಕಾರ್ಖಾನೆಗಳಲ್ಲಿ ಉದ್ಯೋಗಗಳನ್ನು ಪಡೆಯಲಾಗಲಿಲ್ಲ. (ಮಹಿಳಾ ಅಧ್ಯಯನ ೨, ಡಾ. ಹೇಮಲತಾ ಎಚ್.ಎಮ್.) ಹಲವು ದಶಕಗಳ ನಂತರ ಮಹಿಳೆಯು ಮತ್ತೆ ಗುಡಿಕೈಗಾರಿಕೆಗಳಿಗೆ ಲಗ್ಗೆ ಇಟ್ಟಳು. ಗುಡಿ ಕೈಗಾರಿಕೆಗಳು ಒಂದು ನಿರ್ಧಿಷ್ಟವಾದ ಸ್ಥಳಕ್ಕೆ ಒಂದು ಸಮುದಾಯಕ್ಕೆ ಮಾತ್ರ ಸಂಬಂಧಿಸಿದ್ದಾಗಿರುತ್ತದೆ. ಇವುಗಳು ಸಣ್ಣ ಪ್ರಮಾಣದಲ್ಲಿ ಮನೆಯಲ್ಲಿ ಮಾಡುವಂಥ ಕೈಗಾರಿಕೆಗಳಾಗಿರುತ್ತವೆ. ದೊಡ್ಡ ದೊಡ್ಡ ಕೈಗಾರಿಕೆಗಳ ಜೊತೆಯಲ್ಲಿ ಪೈಪೋಟಿ ಮಾಡುವಂಥ ಸ್ಪರ್ಧಾತ್ಮಕ

ಗುಣಗಳು ಈ ಗುಡಿಕೈಗಾರಿಕೆಗಳಿಗೆ ಇರುವುದಿಲ್ಲವಾಗಿದೆ. ಇದರಲ್ಲಿ ಮಹಿಳೆಯರೇ ಹೆಚ್ಚಾಗಿ ತೊಡಗಿಸಿಕೊಂಡಿರುತ್ತಾರೆ. ಏಕೆಂದರೆ ಮಹಿಳೆಯರ ಅಗ್ಗವಾಗಿ ಸಿಗುವ ಕೂಲಿ ಆಳಾಗಿ ಇವಳನ್ನೇ ಪ್ರತಿಬಿಂಬಿಸುತ್ತಿರುತ್ತಾರೆ. ಮಹಿಳೆಯು ಇಲ್ಲಿ ಕುಟುಂಬದ ಎಲ್ಲ ಕೆಲಸ ಕಾರ್ಯಗಳಿಮದ ಹಿಡಿದು (ಬೆಳಿಗ್ಗೆ ತಿಂಡಿಯಿಂದ ಹಿಡಿದು ರಾತ್ರಿ ಹಾಸಿಗೆ ಹಾಸಿ ಎಲ್ಲರೂ ಮಲಗುವವರೆಗೂ) ಮಹಿಳೆಯ ಕೆಲಸಗಳಿರುತ್ತವೆ. ಇದರಲ್ಲೇ ಗುಡಿಕೈಗಾರಿಕಗಳಲ್ಲಿ ಮಹಿಳೆಯು ತನ್ನನ್ನು ತಾನು ತೊಡಗಿಸಿಕೊಂಡಿರುತ್ತಾಳೆ. ಈ ಕೈಗಾರಿಕೆಗಳಲ್ಲಿ ಕೌಶಲ್ಯದ ಕೆಲಸಗಳು ಮಹಿಳೆಯರದೇ ಹೆಚ್ಚಾಗಿ ಕಂಡುಬರುತ್ತವೆ. ಹೆಚ್ಚು ಶ್ರಮದ ಕೆಲಸಗಳು ನಿರ್ವಹಣೆಯನ್ನೇ ಪುರುಷರ ಪಾಲಿಗೆ ಸಿಗುತ್ತದೆ. ಕಡಿಮೆ ಶ್ರಮದ ಕೆಲಸ ಮತ್ತು ಹೆಚ್ಚಿನ ಕೌಶಲ್ಯದಿಂದ ಕೂಡಿದ ಕೆಲಸವು ಮಹಿಳೆಯರ ಪಾಲಿಗೆ ದೊರಕಿರುತ್ತದೆ. ಪುರುಷನು ಇಲ್ಲಿ ಲಾಭದಾಯಕ ಹುದ್ದೆಯನ್ನೇ ಹೊಂದಿದಂತೆ ಮಹಿಳೆಯು ಮನೆಯಲ್ಲಿ ಯಾವುದೇ ಕೂಲಿಯನ್ನು ಕೇಳದೆ ಮೂರು ಹೊತ್ತಿನ ಊಟಕ್ಕೆ ಕಾರ್ಯ ನಿರ್ವಹಣೆ ಮಾಡಿದಂತೆ ಇಲ್ಲಿ ಅರ್ಥವಾಗುತ್ತದೆ.

ಗುಡಿಕೈಗಾರಿಕೆಗಳಲ್ಲಿ ಮಹಿಳೆಯ ಬದುಕು ಎಷ್ಟು ಕೌಶಲ್ಯದಿಂದ ಕೂಡಿರುತ್ತದೆಯೋ ಅಷ್ಟೇ ದುಸ್ತರವಾದ ಪರಿಸ್ಥಿತಿಯನ್ನು ಪುರುಷ ಮತ್ತು ಸ್ತ್ರೀಯರು ಇಬ್ಬರೂ ಅನುಭವಿಸುತ್ತಾರೆ ಎಂದು ಹೇಳಬಹುದಾಗಿದೆ. ಉದಾ: ಕುಂಬಾರಿಕೆಯಲ್ಲಿ ಮಡಿಕೆ, ಕುಡಿಕೆಗಳು ಈಗ ಎಲ್ಲಿವೆ. ಅವುಗಳ ಬದಲಿಗೆ ಲೋಹದ ವಸ್ತುಗಳು ಸ್ಪರ್ಧೆಗಿಳಿದಿವೆ. ಚಮ್ಮಾರರ, ಪಾದರಕ್ಷೆಗಳು ಎಲ್ಲಿವೆ ಇದಕ್ಕೆ ಪ್ಲಾಸ್ಟಿಕ್ ಮತ್ತು ಫೈಬರ್‌ನಿಂದ ಕೂಡಿದ ಪಾದರಕ್ಷೆಗಳು ಇಲ್ಲಿ ಹೆಚ್ಚಾಗಿ ಕಂಡುಬರುತ್ತಿವೆ. ಈ ರೀತಿಯಾಗಿ ಆಧುನಿಕತೆಯ ಪ್ರವಾಹದಲ್ಲಿ ಸಣ್ಣಪುಟ್ಟ ಗುಡಿಕೈಗಾರಿಕೆಗಳು ಪ್ರವಾಹಕ್ಕೆ ಸಿಲುಕಿ ನಲುಗಿ ಹೋಗಿವೆ. ಇದರಿಂದ ಇದನ್ನೇ ನಂಬಿದ ಗುಡಿಕೈಗಾರಿಕೆಗಳ ಕುಟುಂಬಗಳು ಬೀದಿಪಾಲಾಗಿವೆ ಎಂದು ಹೇಳಬಹುದಾಗಿದೆ.

ಕುಂಬಾರಿಕೆ : ಕುಂಬಾರಿಕೆ ಎನ್ನುವ ಕಲೆಯು ಬಹಳ ಪುರಾತನ ಕಲೆಯಾಗಿದ್ದು, ಈ ಕಲೆಯು ಬಂದಾದ ಮೇಲೆ ಲೋಹದ ವಸ್ತುಗಳು ಮಾರುಕಟ್ಟೆಗೆ ಬಂದವೆಂದು ಹೇಳಬಹುದಾಗಿದೆ. ಕುಂಬಾರಿಕೆಯಲ್ಲಿ ಕೆರೆಯ ಜೇಡಿಮಣ್ಣನ್ನು ತೆಗೆದುಕೊಂಡು, ಮೊದಲು ಮಣ್ಣನ್ನು ಹದಮಾಡಿಕೊಂಡು, ತಿಗರಿಯನ್ನು ತಿರುಗಿಸುತ್ತಾ, ನಡುವೆ ಮಣ್ಣನ್ನು ಹಾಕಿ ಅದು ತಿರುಗುತ್ತಿರುವ ಸಮಯದಲ್ಲಿ ತಮಗೆ ಯಾವ ಆಕಾರದ ಮಡಿಕೆಗಳು ಬೇಕಾಗುತ್ತವೆಯೋ ಆ ಅಳತೆಯ ಗಾತ್ರವನ್ನು ಆ ತಿಗುರಿ ತಿರುಗುತ್ತಿರುವ ಸಮಯದಲ್ಲಿ ತಮಗೆ ಬೇಕಾದ ಗಾತ್ರದಲ್ಲಿ ಮಾಡುತ್ತಾರೆ. ಇಲ್ಲಿ ಮಹಿಳೆಯ ಕೌಶಲ್ಯದ ಕೆಲಸವು ಬಹಳ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ.

ಚರ್ಮಕೈಗಾರಿಕೆ: ಆಧುನಿಕತೆಯಲ್ಲಿ ಪ್ಲಾಸ್ಟಿಕ್, ಫೈಬರ್ ಫೋಮ್ ಲೆದರ್ ಇನ್ನಿತರೆ ವಸ್ತುಗಳು ಬರುವುದಕ್ಕೆ ಮುಂಚೆ ಚರ್ಮದ ಕೈಗಾರಿಕೆಯು ಕೌಶಲ್ಯದಲ್ಲಿ ತನ್ನದೇ ಆದ ಹೆಸರನ್ನು ಮಾಡಿದಂತ ಚರ್ಮದ ಪಾದರಕ್ಷೆಗಳು ಚರ್ಮದ ಇನ್ನಿತರೆ ವಸ್ತುಗಳೆಂದು ಹೇಳಬಹುದಾಗಿದೆ. ಚರ್ಮಕೈಗಾರಿಕೆಗಳಲ್ಲಿ, ಮೊದಲು ಧರ್ಮವನ್ನು ಹದ ಮಾಡಿ ಬಡ್ಡಗಳನ್ನು ಕತ್ತರಿಸಿಕೊಂಡು ಅದರ ಅಳತೆಗೆ ತಕ್ಕಂತೆ ಅಟ್ಟೆಗಳನ್ನು ಕತ್ತರಿಸಿಕೊಂಡು ಅವುಗಳಿಗೆ ಸುತ್ತಲೂ ಚರ್ಮದ ಇಲ್ಲವೇ ದಾರದ ಮೂಲಕ ಹೊಲಿಗೆಯನ್ನು ಹಾಕುವರು. ಈ ಹೊಲಿಗೆಗಳನ್ನು ಮಹಿಳೆಯರೇ ಹಾಕುತ್ತಾರೆ. ಮತ್ತು ಪಾದಗಳಿಗೆ ಬಾರ್‌ಗಳನ್ನು ತಯಾರು ಮಾಡುತ್ತಾರೆ. ಈ ಬಾರ್‌ಗಳ ತಯಾರಿಕೆಯಲ್ಲಿ ಮಹಿಳೆಯರು ಜಡೆಗಳನ್ನು ಹೆಣೆಯುವುದು ಮತ್ತು ಅವುಗಳನ್ನು ಅಲಂಕಾರವಾಗಿ ಮಾಡಿ ಅವುಗಳಿಗೆ ತಮ್ಮ ಕೌಶಲ್ಯದಿಂದ ಇನ್ನಷ್ಟು ಮೆರಗು ಬರುವಂತೆ ಮಾಡುತ್ತಾರೆ. ನಂತರ ತಯಾರಾದ ಪಾದಗಳಿಗೆ ಈ ಬಾರ್‌ಗಳನ್ನು ಜೋಡಿಸುತ್ತಾರೆ. ಈ ರೀತಿಯಾಗಿ ಪಾದರಕ್ಷೆಗಳು ಸಿದ್ಧಗೊಳ್ಳುತ್ತವೆ.

ಕೌದಿ ಹೆಣಿಕೆ ಮತ್ತು ಕಸೂತಿ: ಕೌದಿ ಕಲೆಯು ಬಹಳ ಹಿಂದಿನ ಕಾಲದಿಂದಲೂ ನಡೆದು ಬಂದ ಕಲೆಯಾಗಿದ್ದು, ಮಹಿಳೆಯು ಮನೆಯಲ್ಲಿರುವ ಹಳೆ ಬಟ್ಟೆಗಳನ್ನು ಒಂದುಕಡೆ ಜೋಡಿಸಿಕೊಂಡು, ಅವುಗಳ ಮೇಲೆ ಮತ್ತು ಕೆಳಗಡೆ ಅಗಲವಾದ ಬಟ್ಟೆಗಳನ್ನು ಜೋಡಿಸಿಕೊಂಡು ನಂತರ ಹೊಲಿಗೆಯನ್ನು ಹಾಕುತ್ತಾರೆ. ಕಸೂತಿ ಕಲೆಯಲ್ಲಿ ಬಣ್ಣ ಬಣ್ಣದ ಬಟ್ಟೆಗಳನ್ನು ತೆಗೆದುಕೊಂಡು ಅವುಗಳಿಗೆ ಬಣ್ಣಬಣ್ಣದ ದಾರಗಳಿಮದ ಕಸೂತಿಯನ್ನು ಮಾಡಿ ಅವುಗಳನ್ನು ಉಡುಪುಗಳನ್ನಾಗಿ ಮಾಡಿಕೊಡುತ್ತಾರೆ. ಈ ರೀತಿಯಾಗಿ ಮಾಡಿದ ಕೌಶಲ್ಯ ಕಲೆಯಿಂದ ಮೂಡಿಬಂದ ಉಡುಪುಗಳಿಗೆ ವಿದೇಶಿಯರಿಂದ ತುಂಬಾ ಬೇಡಿಕೆಯು ವ್ಯಕ್ತವಾಗುತ್ತಿದೆ. ಮತ್ತು ಸ್ವದೇಶಗಳಲ್ಲಿಯೂ ಬೇಡಿಕೆ ಇದೆ.

**೨.೩ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾದ ಗುಡಿಕೈಗಾರಿಕೆಗಳು**

ಗುಡಿಕೈಗಾರಿಕೆಗಳು ಎನ್ನುವ ವಿಷಯವು ಬಹಳ ವಿಶಾಲವಾದ ವಿಷಯ ವಸ್ತುವಾಗಿದೆ. ಸಣ್ಣ ಪ್ರಮಾಣದಲ್ಲಿ ಮಾಡುವ ಕೈಗಾರಿಕೆಗಳನ್ನು ಗುಡಿಕೈಗಾರಿಕೆಗಳಾಗಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ನಾಲ್ಕು ಗುಡಿಕೈಗಾರಿಕೆಗಳನ್ನು ಈ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಈ ನಾಲ್ಕು ಗುಡಿಕೈಗಾರಿಕೆಗಳಲ್ಲಿ ಮಹಿಳಾ ಕೌಶಲ್ಯ, ಮಹಿಳಾ ಶ್ರಮ, ಮಹಿಳೆಯ ಸಾಮಾಜಿಕ, ಆರ್ಥಿಕ, ಜೀವನವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೨.೩.೧ ಚರ್ಮಕೈಗಾರಿಕೆ

ಚರ್ಮಕೈಗಾರಿಕೆ ಮಾಡುವ ಜನರಲ್ಲಿ ಕರಕುಶಲತೆಯ ವಿಷಯದಲ್ಲಿ ಪಾದರಕ್ಷೆಗಳು ತುಂಬಾ ಪ್ರಮುಖ ಪಾತ್ರವಹಿಸುತ್ತವೆ. ಅವು ಚರ್ಮ ಕೈಗಾರಿಕೆರರ ದೈನಂದಿನ ಬದುಕಿನ ಉಪಯೋಗದ ನೆಲೆಯಿಂದ ಒಪ್ಪಿಕೊಂಡಿದೆ. ಉಪಯೋಗದ ವಸ್ತುಗಳು ಚರ್ಮದ ಪಾದರಕ್ಷೆಗಳು ಚಪ್ಪಲಿಗಳು ತುಂಬಾ ವಿಶಿಷ್ಟವಾಗಿ ಸಿಗುತ್ತವೆ. ಆದ್ದರಿಂದ ಅವುಗಳ ಉಪಯೋಗದಿಂದ ನಾವು ಅವುಗಳನ್ನು ಉದ್ಯೋಗ ವ್ಯವಹಾರ ಲಾಭಾಂಶ ಹಾಗೂ ಭೌತಿಕ ಮಟ್ಟದಂಥಹ ಕಲಾತ್ಮಕ ಚರ್ಮ ಕೈಗಾರಿಕೆಗಳು ಅಧ್ಯಯನಕ್ಕೆ ದೊರಕುತ್ತವೆ.

ಮಾನವ ನಿರ್ಮಿತ ಕರಕುಶಲ ಕಲೆಗಳಲ್ಲಿ ಮಹಿಳಾ ಕೌಶಲ್ಯವು ಕೂಡ ಪರುಷನಿಗೆ ಅನುಕೂಲಕರವಾಗಿ ಆತನ ಕೆಲಸಗಳಲ್ಲಿ ಸಹಭಾಗಿಯಾಗಿ ಮಹಿಳೆಯು ನೆಲೆನಿಲ್ಲುವುದು ಕಂಡು ಬರುತ್ತದೆ. ಈ ಚರ್ಮ ಕೈಗಾರಿಕೆಗಳ ಕೌಶಲ್ಯವು ಸೃಜನ ಶೀಲವಾಗಿದ್ದು ಅದರ ಜೊತೆಗೆ ಮಾನವನ ಕಲ್ಪನೆ ಪ್ರಯೋಶೀಲತೆ ಮತ್ತು ತಂತ್ರಗಾರಿಕೆ ಸೇರಿ ತನಗೆ ತಮ್ಮ ಕುಟುಂಬಕ್ಕೆ ಜನಾಂಗಕ್ಕೆ ಉಪಯೋಗಕ್ಕೆ ಬೇಕಾದ ವಸ್ತು, ಉಪಕರಣ, ಪರಿಕರಗಳು, ಸಾಧನಗಳ ಸಲಕರಣಿಗಳನ್ನು ಸ್ತ್ರೀ ಪುರುಷರು ಸ್ವಉದ್ಯೋಗಕ್ಕೆ ಬೇಕಾದ ಎಲ್ಲ ವಸ್ತುಗಳನ್ನು ತಮಗೆ ಬೇಕಾದ ರೀತಿಯಲ್ಲಿ ಅವುಗಳನ್ನು ಬಳಸಿಕೊಂಡಿದ್ದಾರೆ ಎಂದು ಹೇಳಬಹುದು. ಹಾಗೆ ತಯಾರಿಸಿದ ವಸ್ತುಗಳಲ್ಲಿ ತನ್ನ ಬದುಕಿನ ಅವಶ್ಯಕ ಭಾಗವಾಗಿ ದಾಖಲಾಗಿವೆ. ಅಂದರೆ ತಯಾರಿಕೆಯಲ್ಲಿ ಅವರ ಸೌಂದರ್ಯ ಪ್ರಜ್ಞೆಯ ಮಿಳಿತಗೊಂಡು ವಸ್ತುವಿಗೊಂದು ಏಕರೂಪ ವಿನ್ಯಾಸ, ರಚನೆ, ತಯಾರಿಕೆ, ಮತ್ತು ಹದಗಾರಿಕೆ ಹೀಗೆ ಮುಂತಾದ ಪಾದರಕ್ಷೆಗಳಲ್ಲಿ ಅವು ಪ್ರತಿಯೊಂದು ಹೊಸ ಪ್ರಯೋಗಗಳಾಗಿ ರೂಪುಗೊಂಡವು. ಇವುಗಳು ಒಂದು ಕುಶಲ ಕಲೆಯ ಕೌಶಲ್ಯದಿಂದ ಹುಟ್ಟಿಕೊಂಡಿದ್ದರೂ ಬಹಳಷ್ಟು ವೈವಿಧ್ಯತೆಯಿಂದ ಕಾಣುತ್ತವೆ. ಅವು ಒಂದರಂತೆ ಇನ್ನೊಂದು ಇರಲಾರದು ಏಕೆಂದರೆ ಅವುಗಳ ರಚನೆಯ ಹಿಂದಿನ ಮನಸ್ಸು ಮತ್ತು ಕಾಲಗಳು ಬೇರೆ ಬೇರೆಯಾಗಿವೆ ವ್ಯಕ್ತಿಗಳಿಗನುಗುಣವಾಗಿ ಅವುಗಳ ಕೌಶಲ್ಯ ಗುಣಮಟ್ಟ, ಉತ್ಪಾದನೆ ಇವುಗಳಿಂದ ಕುಶಲ ಕಲೆಯು ವೈವಿಧ್ಯ ಪೂರ್ಣವಾಗಿವೆ ಎಂದು ಹೇಳಬಹುದು. ಹೀಗೆ ಉಪಯೋಗದ ನೆಲೆಯಿಂದ ಹುಟ್ಟಿಕೊಂಡ ವಸ್ತುವಿನ ಆಯಾ ನೆಲದ ಸಂಸ್ಕೃತಿಯು ಮಾನವ ಸಮುದಾಯದ ಆಶೋತ್ತರಗಳ ಜೊತೆಗೆ ಸಂಬಂಧವಿರುತ್ತದೆ. ಚರ್ಮಕೈಗಾರಿಕೆಯಲ್ಲಿ ತೊಡಗಿರುವ ಮಾದಿಗರು ಮತ್ತು ಸಮಗಾರರು (ಚಮ್ಮಾರರು) ಒಕ್ಕಲುತನಕ್ಕೆ ಬೇಕಾದ ಬಾರುಕೋಲು, ಪತ್ತಿಗಿ, ಮೀಣಿ, ಭಿತ್ತನೆಗೆ ಸಹಾಯವಾಗುವ ಚರ್ಮದ ಉಡಿ

ಚೀಲ, ಪಾರದಕ್ಷೆ, ನಗಾರಿ, ಹರಿಗೆ ಇವೆ ಮೊದಲಾದ ಚರ್ಮದ ಸಮಗ್ರಿಗಳನ್ನು ಮಾಡುವುದು ಇವರ ಸಾಂಪ್ರಾದಾಯಿಕ ಉದ್ಯೋಗವಾಗಿದ್ದು ಈಚೆಗೆ ಕೂಲಿ ಮಾಡುವುದು ಒಕ್ಕಲುತನ ನೌಕರಿ ಇನ್ನಿತರೇ ಕಸುಬುಗಳಲ್ಲಿ ಜನರು ತೊಡಗಿದ್ದಾರೆ.

ಈ ಸಮಗಾರ ಜನಾಂಗಗಳಲ್ಲಿ ಮುಂಡೇವಾಡಿ, ಭಂಡಾರಿ, ತೆಂಗಾರ ವಗ್ಯಾನವರು, ಚಂದಾವರಿ, ಅಗಸಿಮನಿ, ಮಬ್ರುಕರ, ಹೊಸಮನಿ, ದೊಡ್ಡಮನಿ, ದೊಡ್ಡವಾಡ, ರಾಮದುರ್ಗ, ಮುರುಗೋಡು ಬನ್ನಿಗಿಡ, ಕಾಂಬಳ, ಕಾನಪೇಟ, ಸಾಂಕ್ಯನವರು, ಬೆಳಗಲಿ, ಹೆಬ್ಬಳ್ಳಿ, ಕಟ್ಟೀಮನಿ, ಕುಂದರಗಿ, ಬಾವಲತ್ತಿ, ಭೂತನಾಳ, ಪವಾರ, ಚವ್ಹಾಣ, ರಾಯಭಾಗಿ, ಸಾತಪೂತ್, ಸಾಂಬ್ರಾಣಿ, ತೇರದಾಳು, ಇನ್ನಿತರೆ ಓಸುಗಳಿಂದ (ಅಡ್ಡ ಹೆಸರುಗಳ) ಈ ಜನರನ್ನು ಈ ಎಲ್ಲ ಹೆಸರುಗಳಿಂದ ಚಮ್ಮಾರ ಜನಾಂಗಳನ್ನೆ ಗುರುತಿಸುತ್ತಾರೆ. ಇವರು ಮೂಲತಃ ಉತ್ತರ ಕನ್ನಡದ ಜಿಲ್ಲೆಗಳಲ್ಲಿ  ಕನ್ನಡವನ್ನೆ ಮಾತನಾಡುತ್ತಾರೆ. ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ಮಹರಾಷ್ಟ್ರದ ಸೊಲ್ಲಾಪುರ, ಕೊಲ್ಲಾಪುರಗಳಲ್ಲಿಯೂ ಚಮ್ಮಾರರು ನೆಲೆನಿಂತಿದ್ದು ಇಲ್ಲಿರುವ ಜನರು ಇವರ ಭಾಷೆಯು ಕನ್ನಡ, ಮರಾಠಿ, ಹಿಂದಿ, ಉರ್ದು, ಇನ್ನಿತರೆ ಭಾಷೆಗಳನ್ನು ಬಳಸಿಕೊಳ್ಳುತ್ತಾರೆ.

**ಸಮಗಾರರ (ಚಮ್ಮಾರ) ಧಾರ್ಮಿಕ ಸಂಪ್ರದಾಯಗಳು**

ಸಮಗಾರರ ವಿವಿಧ ಜನ ಸಂಪ್ರದಾಯಗಳು ಬೇರೆ ಬೇರೆ ಕಾರ್ಯಗಳಲ್ಲಿ ಬೇರೆ ಬೇರೆ ರೀತಿಯಗಿ ಇವೆ. ವಿವಾಹದ ಪ್ರಕ್ರಿಯೆಯಲ್ಲಿ ಗಂಡು ಇಲ್ಲವೆ ಹೆಣ್ಣಿನ ಮನೆಯಲ್ಲಿ ಆರ್ಥಿಕ ಸ್ಥಿತಿಗತಿಗಳಿಗೆ ತಕ್ಕಂತೆ ಅನುಕೂಲ ಅನಾನುಕೂಲಕ್ಕೆ ತಕ್ಕಂತೆ ಗಂಡು ಇಲ್ಲವೆ ಹೆಣ್ಣಿನ ಮನೆಯಲ್ಲಿ ನಡೆಯುವುದು ಸಂಪ್ರದಾಯವಾಗಿದೆ. ಮದುವೆಯ ಮಾತುಕತೆಯು ನಿಶ್ಚಿತಾರ್ಥ ಇನ್ನಿತರೆ ಕಾರ್ಯಕ್ರಮಗಳನ್ನು ನಡೆಸಲು ಸಮಾಜದ ಗುರುಹಿರಿಯರು ತಂದೆ ತಾಯಿಗಳು ಎಲ್ಲರ ಸಮ್ಮುಖದಲ್ಲಿ ಸಮಾಜದ ಅಧ್ಯಾಕ್ಷರ ಸಮ್ಮುಕದಲ್ಲಿ ಈ ಕಾರ್ಯಗಳನ್ನು ನೆರೆವೇರಿಸುವರು ಇವರ ವಿವಾಹಗಳು ಬ್ರಾಹ್ಮಣರು ಪುರೋಹಿತರ ಜಂಗಮರು ಇವರುಗಳ ಮಾರ್ಗದರ್ಶನದಲ್ಲಿ ನಡೆಸುವುದು ಮೊದಲಿನಿಂದಲೂ ನಡೆಸಿಕೊಂಡು ಬಂದಂಥ ರೂಢಿ ಸಂಪ್ರದಾಯವಾಗಿದೆ.

ಸಮಗಾರ ಸಮುದಾಯಗಳಲ್ಲಿ ಮಹಿಳೆಗೆ ಆರ್ಥಿಕವಾಗಿ ಯಾವುದೇ ರೀತಿಯ ಜವಾಬ್ದಾರಿಗಳನ್ನು ನೀಡಿಲ್ಲವಾಗಿದೆ ಇದರಲ್ಲಿ ಮಹಿಳೆಯರು ಹಿರಿಯ ಸ್ತ್ರೀಯರಿಗೂ ಕೂಡ ಯಾವುದೇ ಹಣದ ಆಸ್ತಿಯ ಜವಾಬ್ದಾರಿಗಳು ನೀಡಿಲ್ಲವಾಗಿದೆ. ಈ ಎಲ್ಲ ಅಧಿಕಾರಗಳು ಪುರುಷನಕೈಯಲ್ಲಿ (ತಂದೆ, ಗಂಡ, ಮಗ,

ಅಣ್ಣ, ತಮ್ಮ, ಮಾವ, ಅಳಿಯ) ಇನ್ನಿತರೆ ಪಾತ್ರಗಳನ್ನ ಪುರುಷನು ಆ ಕುಟುಂಬಗಳಲ್ಲಿ ಅಲಂಕರಿಸಿರುತ್ತಾನೆ. ಈ ಕುಟುಂಬಗಳಲ್ಲಿ ಮಹಿಳೆಯು ಅಡಿಗೆ ಕೆಲಸ ಮಕ್ಕಳನ್ನು ಹೆರುವುದು ಲಾಲನೆ ಪಾಲನೆ ಪೋಷಣೆ ಹಿರಿಯರ ಚಾಕರಿ ಮಾಡಿಕೊಂಡು ಹೋಗುವುದು ಇನ್ನಿತರೆ ಕೆಲಸಗಳನ್ನ ಮಾಡುವುದು ಕಂಡು ಬರುತ್ತದೆ. ವಿವಾಹ ಸಂಧರ್ಭದಲ್ಲಿ ಹೆಣ್ಣಿನ ದೊಷ ತಮಗೆ ತಟ್ಟದಿರಲಿ ಎಂದು ಗಂಡಿನ ಕಡೆಯವರು ದೇವರಿಗೆ ಸಾಂಪ್ರದಾಯಿಕ ಚಪ್ಪಲಿ ಮಾಡಿಸುತ್ತಾರೆ. ಪುನರ್ ವಿವಾಹಕ್ಕೆ ಅನುಮತಿ ಇದೆ ಮಹಾನವಮಿ ಯುಗಾದಿ ಮತ್ತು ದೀಪಾವಳಿ ಇವರ ವಿಶೇಷ ಮುಖ್ಯ ಹಬ್ಬಗಳು ಇವರು ಮಾಂಸಾಹಾರವನ್ನು ಸೇವಿಸುವುದು ನಡೆದು ಬಂದಿದೆ ಈ ಸಮುದಾಯದಲ್ಲಿ ಯಾರಾದರೂ ಮೃತರಾದರೆ ಹೂಳುವ ಪದ್ಧತಿ ಇದೆ ಈ ಸಂಪ್ರಾದಾಯಗಳು ಮೊದಲಿನಿಂದಲೂ ನಡೆದು ಕೊಂಡು ಬಂದಂಥ ರೂಢಿಗತ ಸಂಪ್ರಾದಾಯಗಳು ಎಂದು ಹೇಳಬಹುದಾಗಿದೆ.

ಈ ಸಮಗಾರ ಸಮುದಾಯದವರು ಹಲವು ದೇವತೆಗಳನ್ನು ಅವಲಂಬಿಸಿದ್ದಾರೆ. ದುರ್ಗಗಮ್ಮ, ಮರಿಯಮ್ಮ, ಲಕ್ಷ್ಮೀ, ರೇಣುಕಾದೇವಿ, ಯಲ್ಲಮ್ಮದೇವಿ, ಹನುಮಂತ, ಸೌದತ್ತಿಎಲ್ಲಮ್ಮ, ಮಣಗೇರಮ್ಮ, ಹುಲಿಗೆಮ್ಮ, ಈ ದೇವತೆಗಳು ಉತ್ತರ ಕನ್ನಡದಲ್ಲಿ ಹೆಚ್ಚಾಗಿ ಕಂಡು ಬರುತ್ತವೆ ಎಂದು ಹೇಳಬಹುದಾಗಿದೆ. ಇಲ್ಲಿ ಮಹಿಳೆಯರಿಗೆ ಪುರುಷನಿಲ್ಲದ ಸಂದರ್ಭದಲ್ಲಿ ಮಹಿಳೆಯು ಮನೆಯ ಒಡತಿಯಾಗಿ ಮನೆಯ ತಾಯಿಯಾಗಿ ಎಲ್ಲ ಜವಾಬ್ದಾರಿಯನ್ನು ನಡೆಸಿಕೊಂಡು ಹೋಗುವ ಪರಿಸ್ಥಿತಿಗಳು ಕಂಡು ಬರುತ್ತದೆ. ಎಂದು ಹೇಳಬಹುದಾಗಿದೆ ಕುಟುಂಬದಲ್ಲಿ ಮಹಿಳೆಯು ಪೂಜೆ, ಪುರಸ್ಕಾರಗಳು, ದೇವರ ಬೇಡಿಕೆ ಈಡೇರಿಸುವಂಥ ಸ್ಥಿತಿಗಳು ಮನೆಯಲ್ಲಿನ ಆರ್ಥಿಕತೆ ವಿಷಯ ಮಾತ್ರ ಬದಿಗಿಟ್ಟು ಉಳಿದೆಲ್ಲ ವಿಷಯಗಳಲ್ಲಿಯೂ ಕೂಡ ಮಹಿಳೆಯನ್ನು ಗೌರವಿಸಲಾಗುತ್ತದೆ. ಈ ಜನಾಂಗದಲ್ಲಿ ತಾಯಿಗೆ ಇಂದ್ದಂಥ ಗೌರವ, ಮರ್ಯಾದೆ, ಪ್ರೀತಿ, ಇವುಗಳು ಹೆಂಡತಿಗೆ ಇಲ್ಲವಾಗಿದೆ. ಇಲ್ಲಿ ತಾಯಿಯ ಮುಖ್ಯ ಪಾತ್ರದಲ್ಲಿ ಹೆಂಡತಿ ಎರಡನೇ ಪಾತ್ರವನ್ನು ಅಲಂಕರಿಸುತ್ತಾರೆ ಎಂದು ಹೇಳಬಹುದಾಗಿದೆ. ಆರ್ಥಿಕ ಚಟುವಟಿಕೆಗಳು ಈ ಸಮುದಾಯದಲ್ಲಿ ಮಹಿಳೆಯು ಪುರುಷನ ಉತ್ಪಾದನಾ ಚಟುವಟಿಕೆಗಳಲ್ಲಿ ಸಹಭಾಗಿಯಾ ಕಾರ್ಯ ನಿರ್ವಹಿಸುತ್ತಾಳೆ ಇದರಲ್ಲಿ ಮಹಿಳೆಯ ಪಾತ್ರಗಳು ಮಹತ್ವದ್ದಾಗಿದೆ. ಮಹಿಳೆಯು ಮುಖ್ಯವಾಗಿ ಪುರುಷನ ಉತ್ಪಾದನಾ ಚಟುವಟಿಕೆಗಲ್ಲಿ ಅರ್ಧಕ್ಕಿಂತ ಹೆಚ್ಚಿನ ಭಾಗದಲ್ಲಿ ಪಾತ್ರ ನಿರ್ವಹಿಸುತ್ತಾಳೆ. ಇಲ್ಲಿ ಪುರುಷನ ಮುಖ್ಯ ಕೆಲಸಗಳೆಂದರೆ ಮಾರುಕಟ್ಟೆಯಿಂದ ಚರ್ಮವನ್ನು ಖರೀದಿಸಿ ಮನೆಗೆ ತಂದು ಅದನ್ನು ನೀರಿನಲ್ಲಿ ನೆನೆಹಾಕಿ ಚರ್ಮವನ್ನು ಹದಮಾಡಿ ತಮಗಿಷ್ಟ ಬಂದ ರೀತಿಯಲ್ಲಿ (ತನ್ನ ಕೆಲಸದ ಅವಶ್ಯಕತೆಗೆ ತಕ್ಕಂತೆ) ಕತ್ತರಿಸಿ ಕೊಂಡು ಮೊದಲು ಮೇಲ್ಪದರವನ್ನು ಕತ್ತರಿಸಿಕೊಂಡು (ಬಡ್ಡ) ನಂತರ ಕೆಳಭಾಗಕ್ಕೆ

ಚರ್ಮದ ಇಲ್ಲವೆ ಬಸ್ ಮತ್ತು ಲಾರಿಗಳ ಟೈಯರ್ ನಿಂದ ಮಾಡಿದ ಲಬ್ಬರ್ ಸೇಲ್ ಅನ್ನು ಕೆಳಗಡೆ ಹಾಕಿ ಅದನ್ನು ಬಡ್ಡದ ಆಕಾರಕ್ಕೆ ತಕ್ಕಂತೆ ಅದನ್ನು ಕತ್ತರಿಸಿ ಕೊಂಡು ರೆಡಿಮಾಡಿ ಕೊಡುವುದು ಈ ರೀತಿಯಾಗಿ ರೆಡಿಯಾದ ಮಾದರಿಯಾನ್ನ ತೆಗೆದುಕೊಂಡು ಮಹಿಳೆಯು ಬಡ್ಡ ಮತ್ತು ಟೈರಿನ ಸೋಲ್ ಇಲ್ಲವೆ ಚರ್ಮದ ಸೋಲ್‌ಗೆ ಜೊತೆಯಾಗಿ ಅದರ ಸುತ್ತಲೂ ಚರ್ಮದ ಪಾದರಕ್ಷೆಗಳಾಗಿದ್ದರೆ ಚರ್ಮದ ಹೊಲಿಗೆನ್ನ ಟೈರ್ ಸೋಲಿನ ಪಾದರಕ್ಷೆಯಿಂದ್ದಾರೆ ದಾರದ ಹೊಲಿಗೆಯನ್ನೆ ಹಾಕುವುದು ಬಲು ಮುಖ್ಯವಾದ ಕಠಿಣ ಕೆಲಸವನ್ನು ಮಹಿಳೆಯು ಮಾಡುತ್ತಾಳೆ. ನಂತರ ಹೀಗೆ ಅರ್ಧತಯಾರಾದ ಪಾದರಕ್ಷೆಗಳ ತುದಿಯನ್ನು ಪುರುಷನು ಕತ್ತರಿಸಿ ಕೊಡುತ್ತಾನೆ. ನಂತರ ಪಾದರಕ್ಷೆಗಳಿಗೆ ಬಣ್ಣದಿಂದ ಅಲಂಕರಿಸುವುದು ಇದಾದ ನಂತರ ಅವುಗಳಿಗೆ ಪಟ್ಟಿಗಳನ್ನು (ಬಾರ್) ಮಾಡುವುದು ಇದರಲ್ಲಿ ಕೂಡ ಮಹಿಳೆಯ ಕೌಶಲ್ಯ ತೋರ್ಪಡಿಸುವ ಅವಕಾಶ ದೊರಕುತ್ತದೆ. ಇದರಲ್ಲಿ ಪಟ್ಟಿಗಳಲ್ಲಿ ಜಡೆಗಳನ್ನು ಹೆಣೆಯುವುದು ಈ ಜಡೆಗಳು ಪಾದರಕ್ಷೆಗಳ ಶೋಭೆಯನ್ನು ಹೆಚ್ಚುಗೊಳಿಸುತ್ತದೆ. ಇದರ ಗೊಂಡೆವು ಗೋಲ್ಡ್, ಕಲರ್ ಬಟನ್, ರಿಂಗ್ ಇನ್ನಿತರೆ ವಸ್ತುಗಳನ್ನ ಬಳಸಲು ಪುರುಷನ ಮಾರ್ಗದರ್ಶನದಿಂದಲೇ ಈ ಎಲ್ಲ ಕೆಲಸ ಕಾರ್ಯಗಳು ನಡೆಯುತ್ತವೆ. ಈ ರೀತಿಯಲ್ಲಿ ರೆಡಿಯಾದ ಬಾರ್‌ಗಳನ್ನು ಚರ್ಮದಿಂದ ಇಲ್ಲವೆ ರಬ್ಬರ್‌ನಿಂದ ಮಾಡಿದ ಬಡ್ಡಗಳಿಗೆ ಬಾರ್‌ಗೆ ಸರಿಹೊಂದುವ ರೀತಿಯಲ್ಲಿ ಅದನ್ನು ಕೊಯ್ದುಕೊಂಡು ಅದರೊಳಗೆ ಬಾರ್‌ಗಳನ್ನ ಸೇರಿಸಿ ಪಾದರಕ್ಷೆಗಳ ಕೂಸಿಯ ಹಂತವನ್ನೆ ಮುಗಿಸಲಾಗುತ್ತದೆ. ಇಲ್ಲಿ ಮಹಿಳೆಯು ಪುರುಷನಿಗೆ ಸಹಾಯಕಳಾಗಿ ಕಾರ್ಯನಿರ್ವಹಣೆ ಮಾಡಿದ್ದಕ್ಕೆ ಮಹಿಳೆಗೆ ಯಾವುದೇ ರೀತಿಯ ಕೂಲಿಯಾಗಲಿ ಸಂಬಳವಾಗಲಿ ಕೋಡುವುದಿಲ್ಲವಾಗಿದೆ. ಏಕೆಂದರೆ ಅವಳ ಕೌಶಲ್ಯಕ್ಕೆ ಇಲ್ಲಿ ಯಾವುದೇ ಸಂಭಾವನೆ ಇಲ್ಲ ಏಕೆಂದರೆ ಪುರುಷನ ಸಹಭಾಯಾಗಿ (ಹೆಂಡತಿಯಾಗಿ) ಕಾರ್ಯನಿರ್ವಹಿಸುತ್ತಾಳೆ. ಆದ್ದರಿಂದ ಅವಳಿಗೆ ಕೂಲಿಯ ಇಲ್ಲವೆ ಸಂಬಳದ ಅಗತ್ಯವಿಲ್ಲವಾಗಿದೆ ಅದೇ ರೀತಿಯಾಗಿ ಯಾರಾದರೂ ಒಬ್ಬ ಕೂಲಿ ಕೆಲಸದವರು ಮಾಡಿದರೆ ಅವರಿಗೆ ಕೂಲಿ ಕೊಡುವ ಅವಶ್ಯಕತೆ ಬರುತ್ತದೆ. ಆದ್ದರಿಂದ ಹೊರಗಿನ ಕೂಲಿಕಾರರನ್ನು ಬಳಕೆ ಮಾಡಿಕೊಳ್ಳುವ ಬದಲು ಮನೆಯಲ್ಲಿ ಮೂರು ಹೊತ್ತು ಊಟ ಹಾಕಿ ಅವನ ಆದಾಯದ ಅರ್ಧ ಭಾಗದ ಕೆಲಸವನ್ನು ಉಚಿತವಾಗಿ ಪಡೆಯುವುದು ಪುರುಷನ ಸೂಕ್ಷ್ಮತೆಯು ಗೋಚರಿಸುತ್ತದೆ.

**ಚರ್ಮಕೈಗಾರಿಕೆ ಮತ್ತು ಜಾತಿಗಳು**

೧ "ಒಂದು ರೀತಿಯ ಇಲ್ಲವೆ ಹಲವುರೀತಿಯ ಕರಕುಶಲ ವಸ್ತುಗಳನ್ನು ತಯಾರಿಸುತ್ತಿದ್ದ ಒಂದು ಜನಾಂಗ ಇಲ್ಲವೆ ಒಂದು ಸಮುದಾಯ ಕ್ರಮೇಣ ಒಂದು ಪ್ರತ್ಯೇಕವಾದ ಜಾತಿ ಎಂದು ಕರೆಸಿಕೊಳ್ಳತೊಡಗಿತು.

ಈ ರೀತಿಯಾದ ಕುಶಲತೆಯನ್ನು ಹೊಂದಿದ ಕಸುಬುಗಳಿಗೆ ಅವರವರ ಜಾತಿ ಸಮುದಾಯಗಳಿಗೆ ತಕ್ಕಂತೆ ಆಯಾ ಜಾತಿಯವರು ಮಾಡಿಕೊಂಡು ಹೋಗುವ ಕಸುಬುಗಳಿಗೆ ಕುಲಕಸುಬುಗಳೆಂದು ಕರೆಯತೊಡಗಿದರು ಹೀಗೆ ಮಾದಿಗರಿರು ಸೌರಾಷ್ಟ್ರದವರು ಸಮಗಾರರು ಮುಸ್ಲಿಂಮರು ಇತರೆ ಬೇರೆ ಜಾತಿಗಳಿವೆ ಸಮಗಾರರು ವಿಶಿಷ್ಟ ಕೌಶಲ್ಯಗಳೇ ಈ ಪ್ರತ್ಯೇಕ ಪಂಗಡಗಳಿಗೆ ಕಾರಣವಾದವು ಪ್ರಾಣಿಗಳು ಅಂದರೆ ಆಕಳು ಕೋಣಗಳು ಮೊದಲಾದ ಪ್ರಾಣಿಗಳು ಚರ್ಮದ ಪಾದರಕ್ಷೆಗಳನ್ನು ಇದೇ ರೀತಿಯ ವಿವಿಧ ಪಾದರಕ್ಷೆಗಳ ಅಲಂಕಾರಿ ಪಾದರಕ್ಷೆಗಳನ್ನು ತಯಾರಿಸುವವರೇ ಸಮಗಾರರು ಇವರು ತಮ್ಮನು ಕಲಾಕಾರರೆಂದು ಗುರುತಿಸಿ ಕೊಳ್ಳುತ್ತಾರೆ. ಇವರು ಚಿತ್ರಿಸುವ ಸಿದ್ದಪಡಿಸುವ ವಿನ್ಯಾಸಗಳ ಪಾಣಿಪರಿಕ ವಿನ್ಯಾಸಗಳಿಂದ ಕೂಡಿಸುವುದರಿಂದ ಸಾಂಪ್ರದಾಯಿಕ ವೆನಿಸಿಕೊಳ್ಳುತ್ತದೆ.

ಚರ್ಮದ ಕೆಲಸವನ್ನು ಮಾಡುವವರೇ "ಚಮ್ಮಾರರು ಅಥವಾ ಮೋಚಿಗರು" ಎಂದು ಕರೆಯುವರು ಇವರು ವಿಧ ವಿಧವಾದ ಪಾದರಕ್ಷೆಗಳನ್ನ ತಯಾರಿಸುವಲ್ಲಿ ಸಿದ್ದಹಸ್ತರು ಇವರು ಉತ್ತಮ ವಿನ್ಯಾಸದಿಂದ ಕೂಡಿದ ಮೃದುವಾದ ಚರ್ಮ, ರೇಷ್ಮೆಗಳಿಂದ ಕೂಡಿದ ಪಾದರಕ್ಷೆಗಳು ಇವರ ಕಲಾವಂತಿಕೆಯನ್ನು ಪ್ರದರ್ಶಿಸುತ್ತವೆ. ಧಾರ್ಮಿಕ ನಂಬಿಕೆಯೊಂದರಂತೆ ಚರ್ಮದ ಕೆಲಸ ಮಾಡುವ ಮಾದಿಗರು ಮೂಲ ಪುರುಷ ಮಾದಿಗರೇ ಹೀಗೆ ಹಿತ್ತಾಳೆ ಚರ್ಮದ ಕೆಲಸಗಾರರಿಗೂ ಶಿಲ್ಪ ಶಲೆ ಅಥವಾ ಕಬ್ಬಿಣದ ಕಲ್ಲಿನ ಕಸುಬಿನವರಿಗೂ ವಿಶ್ವಾಸ ಅಥವಾ ದೈವಜ್ಞನು ಬೆನ್ನಿನ ಕೆಲಸ ಮಾಡುವರೆಲ್ಲ ಮೂಲ-ಪುರುಷರು ಮಹಿಳೆಯರು ಬೆತ್ತದಲ್ಲಿ ಬುಟ್ಟಿ ಚಾಪೆ ಮುಂತಾದವುಗಳನ್ನ ಹೊಗಿಯುವವರನ್ನು ವೇದರೆಂದು ಕರೆಯುತ್ತಾರೆ

ಮನುಷ್ಯನು ಹಿಂದಿನಿಂದಲೂ ತನ್ನ ನಿತ್ಯ ಜೀವನಕ್ಕೆ ಬೇಕಾಗುವ ವಸ್ತುಗಳನ್ನು ತನಗೆ ತೋರಿಸಿದ ರೀತಿಯಲ್ಲಿ ತನ್ನ ಅನುಕೂಲಕ್ಕೆ ತಕ್ಕಂತೆ ತಯಾರಿಸಿಕೊಳ್ಳುತ್ತಿದ್ದ ಈ ಪಸ್ತುಗಳ ತಯಾರಿಕೆಯಲ್ಲಿ ಕ್ರಮೇಣ ವ್ಯತ್ಯಾಸಗಳು ಕಂಡು ಬಂದವು ಇಂಥಹ ವ್ಯತ್ಯಾಸಗಳಿಗೆ ಮನುಷ್ಯರ ನಡುವಿನ ಬೌದ್ಧಿಕ ಮಟ್ಟವೇ ಮುಖ್ಯವಾದ ಕಾರಣವಾಗಿದೆ ಪ್ರಜ್ಞಾವಂತರನು ಪ್ರತಿಭಾವಂತನೂ ಸೂಕ್ಷ್ಮಗ್ರಾಹಿಯೂ ಆಗಿದ್ದನು ತನ್ನಸುತ್ತಲಿನ ಪ್ರಕೃತಿಯಲ್ಲಿನ ಕಲಾವಂತಿಕೆಯನ್ನು ಗುರುತಿಸಿ ತನ್ನ ನಿರ್ಮಾಣ ಕಾರ್ಯದಲ್ಲಿಯೂ ಅದನ್ನು ಅಳಡಿಸಿಕೊಳ್ಳಲು ಪ್ರಾಯತ್ನಿಸಿದ ಇದೇ ರೀತಿಯಾಗಿ ಪಾದರಕ್ಷೆಗಳ ಕುಶಲತೆ ಉಳಿದು ಬಂದಿದೆ ಎಂದು ಹೇಳಬಹುದು. ಪ್ರಾಚೀನ ಗುಹೆಗಳಲ್ಲಿ ಕಾಣುವ ರೇಖಾ ಚಿತ್ರಗಳು ಇದನ್ನೇ ಹೇಳುತ್ತವೆ. ಒಬ್ಬನು ಚಿತ್ರ ರಚಿಸುವುದರಲ್ಲಿ ಚತುರನಾಗಿದ್ದರೆ ಮತ್ತೊಬ್ಬ ಬೇಟೆಯಲ್ಲಿ ಪರಿಣಿತ ಮತ್ತೊಬ್ಬ ಚರ್ಮದ ಕಾರ್ಯಕ್ಕೆ ಅವಶ್ಯಕವಾದ ಉಪಕರಣಗಳ ತಯಾರಿಕೆಯಲ್ಲಿ ನಿಪುಣ ಇನ್ನೊಬ್ಬ ಉಡುಗೆ

ತೊಡುಗೆಗಳನ್ನು ತಯಾರಿಸುವುದರಲ್ಲಿ ಪ್ರವಿಣನಾದನು ಹೀಗೆ ಬೇರೆ ಬೇರೆ ರೀತಿಯ ಕೆಲಸಗಳಲ್ಲಿ ಅವರು ಕೌಶಲ್ಯಗಳನ್ನು ಪಡೆದರು.

ಕಾಲದಿಂದ ಕಾಲಕ್ಕೆ ಸ್ತ್ರೀ-ಪುರುಷರು ವಿವಿಧ ರೀತಿಯ ವಸ್ತುಗಳ ಬಗ್ಗೆ ತಯಾರಿಕೆಯಲ್ಲೇ ಪಾದರಕ್ಷೆಗಳ ಕಲಾತ್ಮಕತೆ ವೈವಿಧ್ಯತೆಗಳು ಕಂಡು ಬರುತ್ತವೆ. ಕುಶಲಕರ್ಮಿಯಾದ ಮನುಷ್ಯ ಕಲೆಗಾರ ನಾಗುತ್ತಾನೆ. ದಿನ ಬಳಕೆಯ ದೃಷ್ಠಿಯಿಂದ ತಯಾರಾಗುತ್ತಿದ್ದ ವಸ್ತುಗಳು ಕೆಲವಾದರೂ ಕಲಾವಸ್ತುಗಳಾದವು. ಮನುಷ್ಯ ಪ್ರಥಮ ಅವಶ್ಯಕತೆಗಳಲ್ಲಿ ಆಹಾರ ಬೇಯಿಸಿ ತಿನ್ನುವ ಪಾತ್ರೆಯು ಕಾಲಿಗೆ ಹಾಕಿಕೊಳ್ಳುವ ಪಾದರಕ್ಷೆಗಳು ಬಹು ಪ್ರಾಚೀನ ಕಾಲದಿಂದ ಬೆಳೆದು ಬಂದಿದೆ ಕರ್ನಾಟಕದ ಚರ್ಮ ಶಿಲಾಯುಗಕ್ಕೆ ಸೇರಿದ ಕಪ್ಪು ಬಣ್ಣ ಸಿಂಗರಿಸಿದ ಕೆಲವು ವಿನ್ಯಾಸ ಹಳದಿ ಕಂದು ಬಣ್ಣದಿಂದ ವಿನ್ಯಾಸಗಳು ದೊರೆತಿವೆ ಚಂದ್ರಾವಳ್ಳಿಯ ಭೂ ಸಂಶೋಧನೆಯಲ್ಲಿ ಸಿಕ್ಕಿರುವ ವಿವಿಧ ರೀತಿಯ ಪಾದರಕ್ಷೆಗಳ ಮೇಲೆ ವರ್ಣಾಲಂಕಾರಗಳು ಇವೆ. ಇದಲ್ಲದೆ ಚರ್ಮದ ಚಪ್ಪಲಿಗಳು ಬೂಟುಗಳು ದೊರೆತಿವೆ. (ಕರ್ನಾಟಕ ಪರಂಪರೆ ೧೯೭-೧೯೮)ಇದೇ ಕರ್ನಾಟಕ ರೀತಿಯಾಗಿ ಹಿಂದೆ ದೇವಾಸುರರು ಸಮುದ್ರವನ್ನು ಕಡೆದ ಕಾಲದಲ್ಲಿ ದೇವತೆಗಳ ಅಮೃತವನ್ನು ಪಡೆದಾಗ ಅದನ್ನು ತುಂಬಿಸಲು ಪಾತ್ರೆಯೊಂದು ಬೇಕಾಯಿತು. ಈ ಕಾರಣಕ್ಕಾಗಿ ವಿಶ್ವ ಕರ್ಮನು ಅವರಿ ಕಾಣಿಕೆಯಾಗಿ ಒಂದು ಜೊತೆ ಪಾದರಕ್ಷೆಗಳನ್ನು ತಯಾರಿಸಿದ ನೆಂಬ ಪುರಾಣ ಕಥೆಯೊಂದಿದೆ. ಈ ರೀತಿಯಲ್ಲಿ ಪ್ರಾಚೀನ ಭಾರತದಲ್ಲಿ ವಿವಿಧರೀತಿಯ ಕಲೆಗಳನ್ನು ಗುರುತಿಸಿ ಅವುಗಳನ್ನು ಚತುರ್ಷಷ್ಠಿ ಕಲೆಗಳೆಂದು (ಅರವತ್ನಾಲ್ಕು ಕಲೆಗಳು) ಎಂದು ಕರೆದಿದ್ದಾರೆ. ವಾತ್ಸಾಯನ ಕಾಮಸೂತ್ರದಂತೆ ಬೆತ್ತ ಮತ್ತು ಮಂಚಗಳನ್ನು ಇತರ ವಸ್ತುಗಳನ್ನು ತಯಾರಿಸುವ ಕಲೆ ನೇತ್ರದಾನ ವಿಕಲ್ಪ ಎನ್ನಲಾಗುತ್ತಿತ್ತು. ಅಕ್ಷರ ಕರ್ಮಿ ಎಂದರೆ ಮೌಲ್ಯ, ನಿಧಿ ಎಂದರೆ ಹಾರ, ಚರ್ಮದ ಕಲಾಪ, ಮಾಣಾವರ, ಶೀರ್ಷಿಕೆ ಉಪಶೀಕ್ಷರ ಮುಕಾಂಡರಕ ಅವಘಾಟಕ ಮತ್ತು ತರಲಪ್ರತಿಭಂದ ಇವಲ್ಲದೆ ಹಳದಿಪಾದಗಳು ಕೆಂಪು ಬಣ್ಣ ನವ ರಸಗಳನ್ನು ತಯಾರಿಸುತ್ತಿದ್ದರು ಹಾಗೂ ವಿವಿಧ ರೀತಿಯ ಬಗೆ ಬಗೆಯ ಚರ್ಮದಿಂದ ತಯಾರಿಸುತ್ತಿದ್ದರು.

ಪ್ರಾಚೀನ ಕರ್ನಾಟಕದಲ್ಲಿ ಚಮ್ಮಾರರು ಚರ್ಮದ ಪಾದರಕ್ಷೆಗಳನ್ನು ತಯಾರಿಸುವುದರಲ್ಲಿ ನಿಪುಣರಾಗಿದ್ದರು. ಇವರನ್ನು ಸಮಗಾರರೆಂದು ಗುರುತಿಸಿದ್ದಾರೆ ಇವರು ಕರ್ನಾಟಕದಲ್ಲಿ ಹೆಚ್ಚಿನದಾಗಿ ಬಾಗಲಕೋಟೆ ಜಿಲ್ಲೆಯಲ್ಲಿ ಕೆಲವು ಪ್ರದೇಶಗಳಲ್ಲಿ ಕೂಡ ಪಾದರಕ್ಷೆಗಳನ್ನು ತಯಾರಿಸುವ ಕರಕುಶಲ ಕಲೆಗಾರರಿದ್ದಾರೆ. ಗೋಕಾಕದಲ್ಲಿ ಅಥಣಿಯಲ್ಲಿ ಮುಂತಾದ ಪಟ್ಟಣಗಳಲ್ಲಿ ಪಾದರಕ್ಷೆಗಳು ಕಲಾತ್ಮಕ

ವಿನ್ಯಾಸ ಗಳಲ್ಲಿ ಸಿಗುತ್ತವೆ. ಬಾಗಲಕೋಟೆ ಸಮಗಾರರು ಕೆಲಸ ಕುಲಕಸುಬುಗಳು ಒಂದು ಬಹುಶಃ ಇದೇ ಆಗಿದೆ. ಇವರು ಚರ್ಮದ ಪಾದರಕ್ಷೆ ತಯಾರಿಕೆ ಮಾಡುವ ಚಪ್ಪಲಿಗಳಲ್ಲಿ ನಿಪುಣರು ಎಂದು ಹೇಳಬಹುದಾಗಿದೆ."

**ಸಮಗಾರರ ವ್ಯಾಪಾರ ವ್ಯವಸ್ಥೆ**

ಹಲವಾರು ಸಮುದಾಯದ ಕುಲಕಸುಬುಗಳಿಗೆ ಒಂದು ವ್ಯಾಪಾರ ವ್ಯವಸ್ಥೆ ಇರುತ್ತದೆ. ಈ ವಿಧದಲ್ಲಿ ಪ್ರಾಚೀನ ಕಾಲದಿಂದಲೂ ವ್ಯವಹಾರ ನಡೆಯುತ್ತಾ ಬಂದಿದೆ ಭಾರತದ ಅತ್ಯಂತ ಪ್ರಾಚೀನವಾದ ಸಿಂಧೂ ನಾಗರೀಕತೆಗೆ ಬುನಾದಿಯಾಗಿದ್ದು ಆ ಸಂಸ್ಕೃತಿ ಹೊರ ದೇಶಗಳೊಡನೆ ಮತ್ತು ದೇಶದ ಒಳಗೆ ಇಟ್ಟು ಕೊಂಡಿದ್ದ ವ್ಯಾಪಾರ ವ್ಯವಸ್ಥೆ ಸಂಪರ್ಕಗಳು ಈ ದೇಶದ ಸಮಗ್ರ ಪ್ರಗತಿಗೆ ಆಂತರಿಕ ಹಾಗೂ ವಿದೇಶಿ ವ್ಯಾಪಾರಗಳು ಎಷ್ಟು ಪ್ರಮುಖ ಹಾಗೂ ಅಗತ್ಯವೆಂಬುದನ್ನು ಒತ್ತಿ ಹೇಳಿದ್ದಾರೆ. ಭಾರತದೇಶದ ಆಧುನಿಕ ಇತಿಹಾಸ ಆರಂಭವಾದದ್ದು ವಿದೇಶಿ ವ್ಯಾಪಾರಿಗಳ ಸಂಪರ್ಕದಿಂದಲೇ ಎಂದು ಹೇಳಬಹುದಾಗಿದೆ.

ಇದೇ ರೀತಿಯಲ್ಲಿ ನಡೆದು ಬಂದ ವ್ಯಾಪಾರದಲ್ಲಿ ಪುರುಷನ ಜೊತೆಯಲ್ಲಿ ಸಹಭಾಗಿಯಾಗಿ ಮಹಿಳೆಯು ಪುರುಷನ ಉತ್ಪಾದನಾ ಸಾಮಗ್ರಿಯಿಂದ ಹಿಡಿದು ಮಾರಾಟ ಮಳಿಗೆಗೆ ಬರುವವರೆಲ್ಲ ಅವನ ಜೊತೆಯಲ್ಲಿದ್ದು ಪುರುಷನಿಗೆ ಸಹಾಯಕಳಾಗಿ ಕಾರ್ಯ ನಿರ್ವಹಣೆ ಮಾಡುತ್ತಾಳೆ. ಜನರ ಅಗತ್ಯವಿರುವಕಡೆ ಪಾದರಕ್ಷೆಗಳನ್ನು ರವಾನಿಸಿ ಅನುಭೋಗಿಗಳಿಗೆ ಒದಗಿಸುವ ಕಾರ್ಯವನ್ನು ವ್ಯಾಪಾರ ನಿರ್ವಹಿಸುತ್ತದೆ. ಇದರ ಜೊತೆಗೆ ಹೊಸ ಬೇಡಿಕೆಗಳನ್ನು ಸೃಷ್ಟಿಸುತ್ತದೆ. ಇಂಥಹ ಆರ್ಥಿಕ ಕ್ರಿಯೆಯಲ್ಲಿ ವ್ಯಾಪಾರಿ ವರ್ಗಗಳು ಪ್ರಮುಖ ಪಾತ್ರ ವಹಿಸುತ್ತವೆ. ಯಾವುದೇ ಪ್ರದೇಶಕ್ಕೆ ವ್ಯಾಪಾರಿ ವ್ಯವಸ್ಥೆಗಳು ಅನಿವಾರ್ಯ. ಇದಲ್ಲದೇ ಯಾವುದೇ ಒಂದು ಗೊತ್ತಾದ ಹಳ್ಳಿಗಳಾಗಲಿ, ಪಟ್ಟಣವಾಗಲಿ, ಪ್ರದೇಶವಾಗಲಿ ಆರ್ಥಿಕ ದೃಷ್ಟಿಯಿಂದ ಸ್ವಯಂ ಪರಿಪೂರ್ಣವಾಗಿರುವುದಿಲ್ಲ ಇಂಥಹ ಪರಿಸ್ಥಿತಿಯಲ್ಲಿ ವ್ಯಾಪಾರ ಒಂದು ಅಗತ್ಯವಾದ ಕೊಂಡಿಯಾಗಿರುತ್ತದೆ. ವ್ಯಾಪಾರ ವ್ಯವಸ್ಥೆ ಒಂದು ಅಗತ್ಯವಾಗಿದೆ ಅದೇ ರೀತಿಯಾಗಿ ವ್ಯಾಪಾರದ ವ್ಯವಸ್ಥೆ ಅಭಿವೃದ್ಧಿಯಿಂದ ಲಾಭವಾಗಿದೆ. ಹೀಗೆ ಅರ್ಥ ವ್ಯವಸ್ಥೆಯಲ್ಲಿ ಅತೀ ಮುಖ್ಯಘಟಕವಾಗಿರುವ ವ್ಯಾಪಾರ ವ್ಯವಸ್ಥೆಯ ಸ್ಥಿತಿಗತಿಗಳನ್ನು ಆರಿಸಿಕೊಂಡಿರುವುದು ಕಾಲದಲ್ಲಿನ ಚೌಕಟ್ಟನ್ನೊಳಗೊಂಡಿದೆ.

ವ್ಯಾಪಾರದ ಬೆಳವಣಿಗೆಗೆ ಒಂದು ಪ್ರದೇಶದ ಭೌಗೋಳಿಕ ಪರಿಸರದ ಪಾತ್ರ ಪ್ರಮುಖವಾದದ್ದು ಈ ದೃಷ್ಟಿಯಲ್ಲಿ ಅಂದಿನ ಕೆಲವು ಸ್ಥೂಲ ಭೌಗೋಳಿಕ ಅಂಶಗಳನ್ನು ತಿಳಿದುಕೊಳ್ಳುವುದು ಅಗತ್ಯ ಈ

ಭೂಪ್ರದೇಶದಿಂದ ಆವೃತವಾಗಿ ಬೆಟ್ಟ, ಗುಡ್ಡಗಳು, ಕಾಡುಗಳು ವ್ಯಾಪಾರ ದೃಷ್ಟಿಯಲ್ಲಿ ಅಡ್ಡವಾಗ ತೊಡಗಿದ್ದವು. ಈ ಸಮಗಾರರು ಕಸುಬುಗಳನ್ನೆ ನಿರಂತರವಾಗಿ ನಡೆಸಿಕೊಂಡು ಹೋಗುತ್ತಿದ್ದರು. ಈ ವ್ಯಾಪಾರ ವ್ಯವಸ್ಥೆಗಳು ಹತ್ತಾರು ಪ್ರದೇಶಗಳಲ್ಲಿ ಚಮ್ಮಾರರಿಗೆರು ಇದ್ದ ಅಡ್ಡಿಯೆಂದರೆ ತನ್ನದೇ ಆದ ಪಟ್ಟಣಗಳು ಬಂದರುಗಳು ಇದ್ದವು ಮದ್ರಸ್, ಬೊಂಬಾಯಿ, ಬೆಂಗಳೂರು, ಹುಣಸೂರು, ಮಂಗಳೂರು, ಚರ್ಮದ ತನ್ನ ಸಮುದ್ರೋತ್ತರ ಮಾರುಕಟ್ಟೆಗಳಿಗೆ ಚಪ್ಪಲಿಗಳನ್ನು ರವಾನಿಸಲು ಅವಲಂಬಿಸುವ ಸ್ಥಿತಿ ಉಂಟಾಗಿತ್ತು ಎಂದು ಹೇಳಬಹುದಾಗಿದೆ.

**ವ್ಯಾಪಾರ ಕೇಂದ್ರಗಳು (ಸಂತೆ ಮಾರುಕಟ್ಟೆಗಳು)**

ಹತ್ತೊಬ್ಬತ್ತನೆಯ ಶತಮಾನದಲ್ಲಿ ವಾರದ ಸಂತೆಗಳು ವ್ಯಾಪಾರ ವ್ಯವಸ್ಥೆಯಲ್ಲಿ ಪ್ರಾಧಾನ ಪಾತ್ರಗಳನ್ನ ವಹಿಸಿದ್ದವು ಸಂತೆಗಳು ಬಹಳ ಹಿಂದಿನ ಕಾಲದಿಂದಲೂ ಇದ್ದವು. ಅನುಕೂಲವಾದ ಸ್ಥಳಗಳಲ್ಲಿ ಅವುಗಳನ್ನು ಸ್ಥಾಪಿಸಿದರು.

ಸಂತೆಗಳಲ್ಲಿ ಜನರು ದನಕರುಗಳು, ಚಪ್ಪಲಿಗಳನ್ನು ಮಾರುತ್ತಿದ್ದರು ಗದ್ದಾಲದ ವಾತಾವರಣ ಇರುತ್ತಿದ್ದವು. ಸಾಮಾನ್ಯವಾಗಿ ಇವು ವಾರಕ್ಕೊಮ್ಮೆ ನಡೆಯುತ್ತಿರುತ್ತವೆ. ಸುತ್ತಮುತ್ತಲಿನ ಊರುಗಳಿಂದ ಜನರು ಬರುತ್ತಿದ್ದರು. ದೊಡ್ಡ ಊರುಗಳಲ್ಲಿ ಮಾತ್ರ ಇಂಥಹ ವಾರದ ಸಂತೆಗಳು ನಡೆಯುತ್ತಿದ್ದವು. ಸಂತೆಯಲ್ಲಿ ಎಲ್ಲಾ ರೀತಿಯ ಚಪ್ಪಲಿಗಳು, ಹತ್ತಿಬಟ್ಟೆಗಳು, ಬೂಟುಗಳು, ಗೊಂಬೆಗಳು, ಸೀರೆಗಳು, ತರಕಾರಿಗಳು, ಹಣ್ಣುಗಳು, ಹಂಪಲುಗಳು, ಕಬ್ಬಿಣದ ಸಾಮಾನುಗಳು ಮುಂತಾದವುಗಳು ಮಾರಾಟಕ್ಕೆ ದೊರೆಯುತ್ತಿದ್ದವು.

ಪ್ರತಿಯೊಂದು ಜಿಲ್ಲೆಗಳಲ್ಲಿ ಹಾಗೂ ತಾಲೂಕಿನಲ್ಲಿ ಅನುಕೂಲವಾದ ವಾರದ ಸಂತೆಗಳ ಏರ್ಪಾಡು ಮಾಡಲಾಗಿರುತ್ತದೆ. ಇಲ್ಲಿ ಸಮಗಾರರು ಮಾಡಿದಂಥ ಚಪ್ಪಲಿಗಳು ವಿಶೇಷವಾಗಿ ಕಂಡು ಬರುತ್ತವೆ. ಏಕೆಂದರೆ ಇವರು ಅಪ್ಪಟ ಚರ್ಮದಿಂದ ಮಾಡಿದಂಥ ಪಾದರಕ್ಷೆಗಳಾಗಿರುತ್ತವೆ. ಇದರೆ ಬೇರೆಯವರುರೀತಿಯ ಚರ್ಮದ ಮತ್ತು ರಬ್ಬರ್‌ಗಳನ್ನು ಬಳಸಿ ಪಾದರಕ್ಷೆಗಳನ್ನು ಮಾಡಿರುತ್ತಾರೆ ಈ ಸಂತೆಗಳಲ್ಲಿ ಹೆಣ್ಣು ಮಕ್ಕಳು ಪ್ರತ್ಯೆಕ ಅಂಗಡಿಗಳನ್ನು ಹಾಕಿ ಕೊಂಡು ವ್ಯಾಪಾರ ಮಾಡುತ್ತಾರೆ. ಈ ಸಂತೆಗಳಲ್ಲಿ ಮಾಡಿದ ವ್ಯಾಪಾರದ ಹಣವನ್ನು ಮನೆಯ ಯಜಮಾನನಿಗೆ ಕೊಟ್ಟು ತಾನು ತನ್ನ ಯಾವುದೇ ಕಲಬೆರಿಕೆ ಹಣವನ್ನು ತೆಗೆದುಕೊಳ್ಳುವುದಿಲ್ಲ. ಮೂರು ಹೊತ್ತಿನ ಊಟ ಮನೆ ಕೆಲಸ ಮಕ್ಕಳ ಪಾಲನೆ ವಯೋವೃದ್ದರ ಆರೈಕೆ ಇನ್ನಿತರೆ ಚಟುವಟಿಕೆಗಳು ಇದರ ಜೊತೆಗೆ ಗಂಡನ,

ತಂದೆಯ, ಮಗನ, ಜೊತೆಯಲ್ಲಿ ಚರ್ಮ ಕೈಗಾರಿಕೆಯಲ್ಲಿ ಹೆಚ್ಚಿನ ಕಠಿಣವಾದ ಕೆಲಸಗಳನ್ನೆ ಮಾಡಿಕೊಡಬೇಕು ಇವಳು ಗಂಡನಿಗೆ ಸಹಕರಿಸದಿದ್ದರೆ ಆ ವಾರದ ಪಾರದಕ್ಷೆಗಳು ತಯಾರಾಗುವುದೇ ಇಲ್ಲ ತಯಾರಾಗದೇ ಹೋದರೆ ಆ ವಾರದ ಜೀವನ ನಡೆಯುವುದು ಕಠಿಣವಾಗಿರುತ್ತದೆ. ಮಕ್ಕಳ ಶಾಲಾ ಕಾಲೇಜುಗಳು ಶುಲ್ಕ ಮನೆ ಬಾಡಿಗೆ ಅಕ್ಕಿ ಬೇಳೆ ಇನ್ನಿತರೆ ದಿನದುದ್ದಕ್ಕೂ ಬೇಕಾಗುವ ಸಾಮಗ್ರಿಗಳು ಎಲ್ಲವೂ ನಿಂತು ಹೋಗುತ್ತವೆ. ಆರೋಗ್ಯ ಚೆನ್ನಾಗಿಲ್ಲದಿದ್ದರೂ ಚಿಂತೆಯಿಲ್ಲ ಕೆಲಸ ಮಾತ್ರ ಸಾಗಲೇಬೇಕು ಅವರು ಮಾಡಿದ ಪಾದರಕ್ಷೆಗಳು ಸಂತೆಯಲ್ಲಿ ಮಾರಾಟವಾಗಲೇ ಬೇಕು ಈ ಕಾರಣದಿಂದಲೇ ಸಂತೆ ಮಾರುಕಟ್ಟೆಗಳು ಪ್ರಮುಖವಾದ ಪಾತ್ರವನ್ನುವಹಿಸುತ್ತವೆ.

ಈ ರೀತಿಯ ಸಂತೆಗಳಲ್ಲಿನ ದುಡಿಮೆಯಿಂದ ಹಲವಾರು ಜಾತಿ ಸಮುದಾಯಗಳು ಉಪಕಸುಬುಗಳನ್ನ ನಂಬಿದವರು ಮತ್ತು ಕೆಲವು ಕುಲಕಸುಬುಗಳೆಂದೇ ಇರುವಂಥ ಚರ್ಮ ಕೈಗಾರಿಕೆ ಹೂಗಾರ ಕುಟುಂಬಗಳು ಪ್ರಾಣಿಗಳನ್ನು ಕಡಿಯುವವರು (ಕಟುಕರು) ಕುರಿಸಾಕಾಣಿಕೆಯಲ್ಲಿ ತೊಡಗಿದ ಕುರುಬರು, ತರಕಾರಿ ಮಾರಾಟ ಮಾಡುವವರು, ಹಣ್ಣುಗಳನ್ನ ಮಾರಾಟ ಮಾಡುವವರು, ಇತರೆ ಚಿಲ್ಲರೆ ಅಂಗಡಿ ವ್ಯಾಪಾರಿಗಳು ಕೂಡ ಸಂತೆಯಲ್ಲಿ ಪಾಲ್ಗೊಂಡು ಅವರ ನಿತ್ಯ ಜೀವನಕ್ಕೆ ಮತ್ತು ಒಂದುವಾರದ ಎಲ್ಲಾ ಖರ್ಚನ್ನು ಸರಿ ದೂಗಿಸಿ ಕೊಂಡು ಹೋಗಲು ಅವರು ವಾರದ ಸಂತೆಗಳಿಗೆ ಹೊಗಲೆಬೇಕು ದುಡಿಯಲೇ ಬೇಕು ಇವರಿಗೆ ಯಾವುದೇ ರೀತಿಯ ಅಂಗಡಿಮುಗ್ಗಟ್ಟುಗಳಿಲ್ಲವಾಗಿದೆ. ಇವರಿಗೆ ಯಾವುದೇ ರೀತಿಯ ಸರ್ಕಾರದ ಆಧಾರದ ಅಂಗಡಿಗಳಿಲ್ಲಿವಾಗಿದೆ. ಇವರಿಗೆ ಮೊದಮೊದಲು ಲಿಡ್ಕರ್ ವತಿಯಿಂದ ಕೆಲವು ಸಣ್ಣ ಶೆಡ್‌ಗಳನ್ನು ನೀಡಲಿತ್ತಾದರೂ ಅವುಗಳಾವು ಪ್ರಯೋಜನಕ್ಕೆ ಬಾರದಂತೆ ಕೆಲವು ಬಂಡವಾಳ ಶಾಹಿಗಳ ದೌರ್ಜನ್ಯಕ್ಕೆ ಸಿಕ್ಕಿ ಅವುಗಳು ಎಲ್ಲೋ ಮೂಲೆಯಲ್ಲಿ ಸ್ಥಾಪಿಸ ಬೇಕಾದ ಸಂಧರ್ಭಗಳು ಬಂದೊದಗಿವೆ. ನಂತರ ಅವುಗಳನ್ನು ಜನದಟ್ಟಣೆಯಿಲ್ಲದಿರುವ ಪ್ರದೇಶಗಳಲ್ಲಿ ನಗರಸಭೆಯವರು ಅಲ್ಲಿ ಸ್ಥಳಾವಕಾಶವನ್ನಲ್ಪಿಸುತ್ತಾರೆ ಇದರಿಂದ ಚಮ್ಮಾರರು ಅತಂತ್ರ ಸ್ಥಿತಿಯಲ್ಲಿ ಜೀವನವನ್ನ ನಡೆಸುವಂಥ ಸ್ಥಿತಿಯು ಬಂದೊದಗಿದೆ, ಎಂದು ಹೇಳಬಹುದಾಗಿದೆ

ಈ ಮೇಲಿನ ಎಲ್ಲಾ ವಿಷಯಗಳು ಒಂದು ರೀತಿಯವಾದರೆ ಇನ್ನು ರಾಜಕೀಯದಲ್ಲಿ ಚಮ್ಮಾರ (ಸಮಗಾರ)ಜನಾಂಗದವರಿಗೆ ಯಾವುದೇ ರೀತಿಯ ವಿಧಾನ ಸಭೆ ರಾಜ್ಯ ಸಭೆಗಳಲ್ಲಿ ಟಿಕೇಟ್‌ಗಳನ್ನ ವಿತರಿಸಿಲ್ಲವಾಗಿದೆ ಇದರಿಂದ ರಾಜಕೀಯದಲ್ಲಿಯೂ ಇವರು ಹಿಂದುಳಿದಿರುವುದು ನಮಗೆ ತೋರುತ್ತದೆ. ಎಲ್ಲಾ ಜನಾಂಗದವರಲ್ಲೂ ಒಬ್ಬೊಬ್ಬರು ರಾಜಕೀಯದ ಪ್ರತಿಷ್ಠಿತ ಸ್ಥಾನವನ್ನು ಅಲಂಕರಿಸಿರುತ್ತಾರೆ.

ಆದರೆ ಇವರಿಗೆ ಯಾವ ಸೀಟು ಕೊಟ್ಟಿಲ್ಲವಾಗಿದೆ. ಇದರಿಂದ ನಮಗೆ ತೋರುವುದೆಂದರೆ ಸಮಗಾರ ಸಮುದಾಯವು ರಾಜ್ಯ ಸರ್ಕಾರಕ್ಕೆ ಮತ್ತು ರಾಜಕೀಯ ವ್ಯಕ್ತಿಗಳಿಗೆ ಗೋಚರಿಸಿಲ್ಲ ವೆನಿಸುತ್ತದೆ. ಇದು ಸಮಗಾರರ ಪಾಲಿಗೆ ದುರದೃಷ್ಟಕರ ಸಂಗತಿಯಾಗಿದೆ ಎಂದು ಹೇಳಬಹುದಾಗಿದೆ. ಮನೆಕೆಲಸಗಳನ್ನು ಮಾಡಬೇಕೆಂದು ಹೇಳುತ್ತದೆ. ಸ್ತ್ರೀಯರು ಹೊರಗೆ ದುಡಿಯುವುದನ್ನು ನಿರ್ಬಂಧಿಸುತ್ತದೆ. ಆದರೆ ಅನಿವಾರ್ಯವಾದಾಗ ಅಂದರೆ ಕುಟುಂಬದಲ್ಲಿ ಪುರುಷನಿಲ್ಲದಿದ್ದಾರೆ ಇದ್ದರೂ ಮನೆಯ ನಿರ್ವಹಣೆಯನ್ನು ಮಾಡದಿದ್ದರೆ ಸ್ತ್ರೀಯರು ಹೊರಗೆ ದುಡಿಯಲು ಯಜಮಾನಿ ಎಂದು ಸಮಾಜ ಗುರುತಿಸುವುದಿಲ್ಲ ದುಡಿಮೆಗಾರಳನ್ನಾಗಿ ಪರಿಗಣಿಸುವುದಿಲ್ಲವಾಗಿದೆ.

**೨.೩.೨ ಕಸೂತಿ ಕಲೆ ಮತ್ತು ಕೌದಿ ಹೆಣಿಕೆ**

**ಲಂಬಾಣಿ ಬುಡಕಟ್ಟಿನ ಹಿನ್ನೆಲೆ**

ಇತಿಹಾಸ ಶಾಸ್ತ್ರಜ್ಞರು ಎಲ್ಲ ಜನಾಂಗೀಯ ಎಲ್ಲ ರೀತಿಯ ಸಮುದಾಯಗಳನ್ನ ಕಂಡುಹಿಡಿದಿದ್ದಾರೆ. ಹೀಗೆ ಪೂರ್ವ ಶಿಲಾಯುಗ ಮತ್ತು ಮಧ್ಯ ಶಿಲಾಯುಗಗಳಲ್ಲಿ ಭಾರತದಲ್ಲಿ ಮಾನವ ವಾಸವಾಗಿದ್ದು ಕುರುಹುಗಳನ್ನ ಮಾನವ ಶಾಸ್ತ್ರಜ್ಞರು ಪತ್ತೆಹಚ್ಚಿದ್ದಾರೆ. ಶಿಲಾಯುಗದಲ್ಲಿ ಆ ಪ್ರಕಾರದಿಂದ ಪ್ರಾಚೀನ ಮಾನವನು ಭಾರತಕ್ಕೆ ವಲಸೆ ಬಂದಿರಬೇಕು ಗುಜರಾತಿನಲ್ಲಿ ದೊರೆತ ಅಸ್ತಿ ಪಂಜರ ಈ ವಿಷಯದ ಮೇಲೆ ಬೆಳಕು ಚೆಲ್ಲುತ್ತದೆ. ಅದು ನೀಗ್ರೋ ಜನಾಂಗದ ಲಕ್ಷಣವನ್ನ ಹೊಂದಿದೆ ಸುಮಾರು ೮ ರಿಂದ ೧೦ ಸಾವಿರ ವರ್ಷಗಳ ಹಿಂದೆ ಉತ್ತರ ಆಫ್ರಿಕಾದಿಂದ ನೀಗ್ರೋ ಜನಾಂಗವು ಭಾರತಕ್ಕೆ ಪ್ರವೇಶಿರಬೇಕೆಂಬುದಾಗಿ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಆ ಕಾಲದ ಜೀವನ ವಿಧಾನ ಇತ್ಯಾದಿಗಳ ಬಗೆಗೆ ಹೆಚ್ಚಿನ ಮಾಹಿತಿಗಳು ದೊರೆಯುವುದಿಲ್ಲವಾಗಿದೆ.

ಪ್ರಾಚೀನ ಕಾಲದ ಹರಪ್ಪ ಮತ್ತು ಮೆಹೆಂಜೋದಾರೋ ಇವುಗಳ ಹಿಂದಿನ ಸಂಸ್ಕೃತಿಯ ಬಗೆಗೆ ಕುರುಹುಗಳು ದೊರೆತಿವೆ ಇದನ್ನು 'ಆದ್ಯ ಹರಪ್ಪನ್' ಸಂಸ್ಕೃತಿಯೆಂದು ಕರೆಯಲಾಗಿದೆ. ಅದರ ಕಾಲ ಸುಮಾರು ೨೫೦೦ ವರ್ಷಗಳಾಗಿರುಬೇಕೆಂದು ಸಂಸ್ಕೃತಿಯು 'ಗಂಗಾಕೊಳ್ಳ'ದವರೆಗೆ ಹಬ್ಬಿತ್ತೆಂದುಗಾಗಿಯೂ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಬುಡಕಟ್ಟು ಜನಾಂಗಗಳು ವಿವಿಧ ಬಗೆಗಳಿಂದ ಬಂದಿರುವ ಸಂಗತಿಗಳು ಹಲವಾರು ಪುರಾತತ್ವ ಇಲಾಖೆಯ ಉತ್ಖನನದಿಂದ ತಿಳಿದು ಬಂದಿವೆ ಎಂದು ಹೇಳಬಹುದಾಗಿದೆ. ಒಂದು ಅಂದಾಜಿನ ಪ್ರಕಾರ ಭಾರತದಲಿ ಸುಮಾರು ೬೧೩ ಬುಡಕಟ್ಟುಗಳಿವೆ ಪ್ರತಿಯೊಂದು ಬುಡಕಟ್ಟು ತನ್ನದೆ ಆದ ವೈಶಿಷ್ಟ್ಯವನ್ನು ಹೊಂದಿರುತ್ತದೆ. ಬುಡಕಟ್ಟುಗಳು

ಜಾತಿ ವ್ಯವಸ್ಥೆಯಿಂದ ಭಿನ್ನವಾದ ಸಾಂಸ್ಕೃತಿಕ ನೆಲೆಯನ್ನು ಹೊಂದಿರುತ್ತವೆ ಬುಡಕಟ್ಟುಗಳೂ ಸಹ ಸಂಪ್ರದಾಯ ಧಾರ್ಮಿಕ ಆಚರಣೆಗಳು ಸಾಮಾಜಿಕ ಚೌಕಟ್ಟುಗಳು ಸಾಹಿತ್ಯಿಕ ಸೃಷ್ಠಿ ಸಮಸ್ಯೆ ಇವೆಲ್ಲವುಗಳಲ್ಲಿ ಒಂದು ಮತ್ತೊಂದಕ್ಕಿಂತ ಭಿನ್ನವಾಗಿರುತ್ತವೆ. ಅಲ್ಲದೆ ಒಂದೇ ಬುಡಕಟ್ಟಿನ ಸಮಸ್ಯೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುವಷ್ಟರ ಮಟ್ಟಿಗೆ ಸ್ಥಾಳಿಕ ಮತ್ತು ಭೌಗೋಳಿಕ ಭದ್ರತೆಯನ್ನು ಹೊಂದಿರುತ್ತದೆ.

ಸಾಮಾನ್ಯ ನಾಗರಿಕ ಸಮಾಜದೊಂದಿಗೆ ಹೋಲಿಸಿ ನೋಡಿದಾಗ ಬುಡಕಟ್ಟುಗಳ ಬೆಳವಣಿಗೆಯು ಸಹಜವಾಗಿ ಅತ್ಯಂತ ಹಿಂದುಳಿದಿರುವುದು ಕಂಡು ಬರುತ್ತಿದೆ ಅದೇ ರೀತಿಯಲ್ಲಿ ಒಂದೇ ಬುಡಕಟ್ಟಿನಲ್ಲಿ ಒಂದೆಡೆ ಆದಿ ನಾಗರೀಕರಂತೆ ನಗರಗಳಲ್ಲಿ ವಾಸಿಸುತ್ತ ಸುಬಲೋಲುಪತೆಯ ಜೀವನವನ್ನು ನಡೆಸುವ ಕಟುಂಬಗಳಿದ್ದರೆ. ಮತ್ತೊಂದೆಡೆಯಲ್ಲಿ ಪ್ರಾಚೀನ ಆದಿವಾಸಿಗಳಂತೆ ಗೆಡ್ಡೆ ಗೆಣಸುಗಳನ್ನು ತಿಂದು ಅರೆ ಬೆತ್ತಲೆಯಾಗಿ ಸಂಚರಿಸುವ ಸಣ್ಣ ಸಣ್ಣ ಸೊಪ್ಪಿನ ಗುಡಿಸಲುಗಳಲ್ಲಿ ಅಥವಾ ಗುಹೆಗಳಲ್ಲಿ ವಾಸಿಸುವ ಕುಟುಂಬಗಳೂ ಇವೆ ಹೀಗೆ ಭಿನ್ನವಾದ ಜೀವನ ವಿಧಾನಗಳು ಭಾರತ ದೇಶದಲ್ಲಿ ಅನೇಕ ಬುಡಕಟ್ಟುಗಳಲ್ಲಿ ಕಂಡು ಬರುವುದು ಸಾಮಾನ್ಯ ದೃಶ್ಯವಾಗಿದೆ.

ಭಾರತದ ಸಾಮಾಜಿಕ ಪರಿಸರದಲ್ಲಿ ಜಾತಿ ಮತ್ತು ಬುಡಕಟ್ಟುಗಳೆರಡು ಅಸ್ತಿತ್ವದಲ್ಲಿವೆ. ಜಾತಿಗಳು ಯಾವಾಗಲೂ ಮೇಲು ಮುಖವಾಗಿ ಚಲಿಸಲು ಪ್ರಯತ್ನಿಸುತ್ತಿರುತ್ತವೆ. ಅಂದರೆ ಎಲ್ಲ ಜಾತಿಗಳ ಒಡಲಿನಲ್ಲಿಯೂ ತಾನು ಸಾಮಾಜಿಕವಾಗಿ ಮೇಲಕ್ಕೇರಬೇಕೆಂಬ ಹಂಬಲ ತುಡಿಯುತ್ತಿರುತ್ತದೆ. ಹಾಗೇ ಬುಡಕಟ್ಟುಗಳು ತಮ್ಮ ಮೂಲ ಲಕ್ಷಣಗಳನ್ನು ಕಳೆದುಕೊಂಡು ಜಾತಿಯ ಲಕ್ಷಣಗಳನ್ನು ಮೈಗೂಡಿಸಿಕೊಳ್ಳುತ್ತಿವೆ. ಲಂಬಾಣಿ ಈ ಬಗೆಯ ಬುಡಕಟ್ಟಾಗಿದೆ ಇಂದು ಅದು ಜಾತಿಯಲ್ಲಿ ರೂಢಿಯಲ್ಲಿರುವ ಹಲವಾರು ಆಚರಣೆಗಳನ್ನ ಹಿಂಬಾಲಿಸುತ್ತಿರುವುದನ್ನು ಕಾಣಬಹುದಾಗಿದೆ. ಅಲೆಮಾರಿ ಬುಡಕಟ್ಟು ಜನಾಂಗಗಳ ಅಲೆಮಾರಿ ಪ್ರವೃತ್ತಿಯನ್ನು ಕಳೆದುಕೊಂಡು ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲಲಾರಂಭಿಸಿದರು. ಮುಂದೆ ಇವರು ಇವರ ದೇವರುಗಳನ್ನು ಒಂದು ಕಡೆ ಸ್ಥಪನೆಮಾಡಿ ಅಲ್ಲಿಯೇ ನೆಲೆ ನಿಂತು ಮನೆಗಳನ್ನು ಮಾಡಿ ಅಲ್ಲಿಯೇ ಜೀವನವನ್ನು ಸಾಗಿಸುತ್ತಿದ್ದಾರೆ. ಇಲ್ಲಿ ಇವರಿಗೆ ಬೇಕಾದ ಕಸುಬುಗಳನ್ನು ಮಾಡುತ್ತಾ ಇವರು ಜೀವನವನ್ನ ನಡೆಸುವುದನ್ನ ನಾವು ಕಾಣಬಹುದಾಗಿದೆ.

**ಲಂಬಾಣಿ ಜನಾಂಗದ ಕಸೂತಿ ಕಲೆ**

ಲಂಬಾಣಿ ಜನಾಂಗದ ಮಹಿಳೆಯರ ಪ್ರಾಮುಖವಾದ ಕಲೆ ಎಂದರೆ ಕಸೂತಿ ಕಲೆ ಯಾಗಿದೆ. ಈ ಕಸೂತಿ ಕಲೆಯು ಮಹಿಳೆಯರ ಉಳಿತಾಯ ಯೋಜನೆಯ ಜೊತೆಗೆ ಅವರ ಆರ್ಥಿಕಾಭಿವೃದ್ಧಿಯನ್ನ ಕೂಡ ಹೊಂದಲು ಇದು ಬಹಳ ಅನುಕೂಲಕರವಾದ ಒಂದು ಗುಡಿ ಕೈಗಾರಿಕೆ ಎಂದು ಹೇಳಬಹುದಾಗಿದೆ.

ಜನಪದ ಪ್ರದರ್ಶನ ಕರಕುಶಲ ಕಲೆಗಳಲ್ಲಿ ಲಂಬಾಣಿಗರ ಕಸೂತಿ ಕಲೆ ಅತ್ಯಂತ ಪ್ರಮುಖವಾಗಿದೆ "ಲಂಬಾಣಿ ಮಹಿಳೆಯರು ಕಸೂತಿಯಿಲ್ಲದೆ ಬಟ್ಟೆಗಳನ್ನೇ ಹಾಕಿ ಕೊಳ್ಳುವುದಿಲ್ಲ ಅವರು ತಮ್ಮ ಪೋಷಕಾಗಳನ್ನು ಸಿದ್ದಪಡಿಸಿಕೊಳ್ಳುವಾಗ ಬಟ್ಟೆಗಳಿಗೆ ವಿವಿಧ ಬಗೆಯ ತುಂಡು ತುಕಡಿಗಳನ್ನು ಸೇರಿಸಿ ವರ್ಣಮಯವಾಗಿ ಕಸೂತಿ ಮಾಡಿಕೊಳ್ಳುತ್ತಾರೆ. ವರ್ಣಮಯವಾಗಿರುವ ಅವರ ಪೋಷಾಕಗಳು ನಿಜಕ್ಕೂ ಕಲಾತ್ಮಕವಾಗಿರುತ್ತವೆ. ಮಹಿಳೆಯರು ಹಾಕಿಕೊಳ್ಳುವ ಲಂಗ, ಕುಪ್ಪಸ ಹಾಗೂ ಮೇಲ್ಹುಸುಕುಗಳಿಗೆ ಅನೇಕ ತುಂಡು ತದುಕಡಿಗಳನ್ನು ಸೇರಿಸಿ ನಡು ನಡುವೆ ಚಿಕ್ಕ ಚಿಕ್ಕ ಕನ್ನಡಿಗಳನ್ನು ಹಾಕಿ ಕಸೂತಿ ಮಾಡಿರುತ್ತಾರೆ ಅಲ್ಲದೆ ಗೊಂಡೆ, ಗುಂಡಿ, ನಾಣ್ಯದ ಬಿಲ್ಲೆ ಗೆಜ್ಜೆಸಾರ ಇತ್ಯಾದಿಗಳನ್ನು ಸೇರಿಸಿ ಕಸೂತಿ ಹಾಕುತ್ತಾರೆ. ಲಂಬಾಣಿ ಮಹಿಳೆಯರು ತಮ್ಮ ಬಿಡುವಿನ ಸಮಯದಲ್ಲಿ ಎಂದೂ ಖಾಲಿ ಕುಳಿತು ಸಮಯವನ್ನು ವ್ಯರ್ಥ್ಯಗೊಳಿಸುವುದಿಲ್ಲ ಯಾವುದಾದರೂ ಕಸೂತಿ ಕೆಲಸದಲ್ಲಿ ತೊಡಗಿಸಿಕೊಂಡಿರುತ್ತಾರೆ. ತಮ್ಮ ಪೋಷಾಕುಗಳನ್ನ ತಾವೇ ಸಿದ್ದಗೊಳಿಸ ಬೇಕಾಗಿರುವುದರಿಂದ ಅವರಲ್ಲಿ ಪ್ರತಿಯೊಬ್ಬ ಮಹಿಳೆಯೂ ಕಸೂತಿ ಹಾಕುವುದನ್ನು ಅನಿವಾರ್ಯವಾಗಿ ಕಲಿತುಕೊಳ್ಳುತ್ತಾರೆ. ಇದಕ್ಕೆ ಸಾಕಷ್ಟು ಸಮಯ ವ್ಯವಧಾನ ಬೇಕಾಗುತ್ತದೆ ತಮ್ಮ ಮೂರು ಪೋಷಕುಗಳನ್ನು ತಯಾರಿಸಲು ಕನಿಷ್ಟ ಒಂದೆರೆಡು ತಿಂಗಳುಗಳು ಬೇಕಾಗುತ್ತದೆ ಯಂತೆ ಇದು ತುಂಬಾ ವೆಚ್ಚದಾಯಕ ಹಾಗೂ ಕಷ್ಟದ ಕೆಲಸವಾಗಿದೆ ಎಂದು ಹೇಳಬಹುದಾಗಿದೆ.

ಜನಪದದ ಕಲೆಯಲ್ಲಿ ಕಸೂತಿಯೂ ಒಂದು ಮನಮೋಹಕ ಕಲೆಯಾಗಿದೆ ರಂಗು ರಂಗಿನ ದಾರಗಳಿಂದ ಬಣ್ಣ ಬಣ್ಣದ ತುಂಡು ಬಟ್ಟೆಗಳನ್ನು ಗಾಜಿನ ತುಂಡುಗಳನ್ನು ಪ್ರಿಯವಾದ ಸಣ್ಣ ಸಣ್ಣ ವಸ್ತುಗಳನ್ನು ಬಟ್ಟೆಗಳ ಮೇಲೆ ಬಂಧಿಸಿ ಚಿತ್ರ ಚಿತ್ತಾರಕವಾಗಿ ಕಾಣುವಂತೆ ಮಾಡುವ ಕಲೆಯೇ ಕಸೂತಿ ಉತ್ತರ ಭಾರತದ ರೋಹ ಸಾಸ್, ಗರಾಸಿಯಾ, ಜಾಟ್ಸಸ ಸೋದಾ, ಧಾನೇ ತಾಜಾಟ್ಸ್ ಜನರು ಮತ್ತು ಗುಜರಾತ್ ರಾಜಸ್ಥಾನ ಮಹಿಳೆಯರು ತಮ್ಮ ಬಟ್ಟೆಗಳ ಮೇಲೆ ಹಾಕಿ ಕೊಳ್ಳುವ ಕಸೂತಿಯು ಪ್ರಾಸಿದ್ಧವಾಗಿದೆ

ಕಸೂತಿ ಕಲೆಯಲ್ಲಿ ಗುಜರಾತ್‌ನ ಕಚ್ ಪ್ರಾಂತ್ಯದ ಹಿರಿಮೆ ಹೆಚ್ಚಿನದು ಬಲೂಚಿ ಸ್ಥಾನದಿಂದ ಬಹುಹಿಂದೆ ಬಂದ ಜಾಟ್ ಜನಾಂಗ ಈ ಕಲೆಯನ್ನು ತಮ್ಮೊಂದಿಗೆ ಭಾರತಕ್ಕೆ ತಂದಿರಬೇಕೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಅವರ ಚಿಕ್ಕ ಚಿಕ್ಕ ಜಟಿಲ ಜಾಮಿತಿ ವಿನ್ಯಾಸದ ಹೆಣಿಗೆ ಮತ್ತು ತಂತ್ರಗಳಲ್ಲಿ ಬಲುಚಿ ಸ್ಥಾನದ ಪ್ರಾಭಾವವನ್ನು ಗುರುತಿಸಲಾಗಿದೆ. ಬಹುಶುಲ್ಕ ಕಸೂತಿ ಕಲೆಯು

ಪರಂಪರೆಗೆ ಭಾರತದಲ್ಲಿ ನಾಂದಿಹಾಡಿದವರಲ್ಲಿ ಕಚ್ ಚಮ್ಮಾರರು ಹಲವಾರು ಶತಮಾನಗಳಿಂದ ತೊಗಲಿನ ಉತ್ಪನ್ನಗಳ ಮೇಲೆ ಸುಂದರವಾದ ಚಿನ್ನ ಬೆಳ್ಳಿಯ ಕಸೂತಿಯನ್ನು ಅವರು ಹಾಕುತ್ತಿದ್ದರು. ಈ ಜನಾಂಗದ ಕಸೂತಿ ಕಲೆಯನ್ನು ಕಂಡು ಬೆರಗಾಗಿ ಹದಿಮೂರನೇ ಶತಮಾನದಲ್ಲಿ ಭಾರತಕ್ಕೆ ಭೇಟಿಯನ್ನಿತ್ತ ಮಾರ್ಕ ಪೋಲೋ ಅವರ ಈ ಕೌಶಲ್ಯಕ್ಕೆ ಸರಿಸಾಟಿಯಾಗುವಂಥದ್ದು ವಿಶ್ವದಲ್ಲಿಯೇ ಇಲ್ಲ ಎಂದು ಪ್ರಂಶಂಸಿಸಿದ್ದಾರೆ ಕಚ್ ಚಮ್ಮಾರರ ಚರ್ಮದ ಮೇಲಿನ ಕಲೆಯ ಪ್ರಾವಿಣ್ಯತೆಯು ಕಾಲ ಕ್ರಮದಲ್ಲಿ ಬಟ್ಟೆಗಳ ಮೇಲಿನ ಪ್ರೇರಣೆಯಾಗಿರಬೇಕು ಮುಂದೆ ಅದು ಭಾರತದ ಇತರೆ ಜನಾಂಗಗಳಿಗೂ ವ್ಯಾಪಿಸಿರಬೇಕು.

ಭಾರತದಲ್ಲಿ ಲಂಬಾಣಿ ಮಹಿಳೆಯರು ತಾವುಧರಿಸುವ ಬಟ್ಟೆಗಳ ಮೇಲೆ ಹಾಕಿ ಕೊಳ್ಳುವ ಕಸೂತಿಯು ಸುಪ್ರಸಿದ್ಧವಾಗಿದೆ. ಲಂಬಾಣಿ ಮಹಿಳೆಯರಲ್ಲಿ ಕಸೂತಿಯು ಎಂದಿನಿಂದ ಆರಂಭವಾಯಿತೆಂದು ಹೇಳಲು ಬರುವುದಿಲ್ಲವಾಗಿದೆ ಈ ಕಸೂತಿ ಕಲೆಯು ಉತ್ತರ ಭಾರತದ ಇತರ ಜನಾಂಗಗಳಿಂದ ಪ್ರಭಾವ ಬೀರಿದೆಯೇ ಅಥವಾ ಕಚ್ ಚಮ್ಮಾರರ ಕಸೂತಿಯ ಪ್ರೇರಣೆಯಾಗಿದೆಯೇ ಎಚಿದು ತಿಳಿದು ಬರುವುದಿಲ್ಲವಾಗಿದೆ ಆದರೆ ಲಂಬಾಣಿ ಜನಾಂಗದಷ್ಟೇ ಪ್ರಾಚೀನ ಇತಿಹಾಸ ಅವರ ಕಸೂತಿ ಕಲೆಗೂ ಇದೆ ಎಂಬದುನ್ನು ನಾವು ಹೇಳಬಹುದಾಗಿದೆ.

ಯಾವುದೇ ಜನಾಂಗದಲ್ಲಿನ ಜನಪ್ರಿಯ ಕಲೆಯು ಆ ಜನಾಂಗದ ವೃತ್ತಿ ಮನೋಧರ್ಮ ಅಭಿಲಾಷೆಯಗಳು ಅವುಗಳ ಫಲವಾಗಿರುತ್ತವೆ ಲಂಬಾಣಿ ಜನಾಂಗದ ವೃತ್ತಿ ದೊಂಬರಾಟವಾಗಿದ್ದಾಗ ತಮ್ಮ ವೃತ್ತಿಧರ್ಮಕ್ಕೆನುಗುಣವಾಗಿ ಜನಾಕರ್ಷಣೆಯ ಉಡುಪುಗಳನ್ನು ಧರಿಸುವುದು ಅನಿವಾರ್ಯವಾಗಿತ್ತು ಈ ಕಾರಣದಿಂದ ಲಂಬಾಣಿ ಮಹಿಳೆಯರು ಕೆಂಪು ವರ್ಣದ ಬಟ್ಟೆಗಳ ಮೇಲೆ ವಿವಿಧ ವಿನ್ಯಾಸದ ಕಸೂರಿಗಳನ್ನು ಹಾಕಿ ಕೊಂಡು ಧರಿಸಿಕೊಳ್ಳುವುದಕ್ಕೆ ಪ್ರಾರಂಭಿಸಿದರು ಹೀಗೆ ರೂಢಿಗೆ ಬಂದ ಈ ಕಲೆಯು ಕ್ರಮೇಣ ತಮ್ಮ ಮೂಲ ವೃತ್ತಿ ದೊಂಬರಾಟವನ್ನು ಬಿಟ್ಟು ವಾಣಿಜ್ಯ ವೃತ್ತಿಯ ದಿನಗಳಲ್ಲಿ ಮಹಿಳೆಯರಿಗೆ ಹೆಚ್ಚಿನ ಕೆಲಸವಿಲ್ಲದೆ ಬಿಡುವು ಸಿಕ್ಕಿತು ಆ ಬಿಡುವನ್ನು ಮಹಿಳೆಯರು ತಮ್ಮ ಉಡುಪಿನ ಅಲಂಕಾರಕ್ಕೆ ಉಪಯೋಗಿಸಿಕೊಂಡರು ವಾಣಿಜ್ಯ ವೃತ್ತಿಯ ದಿನಗಳಲ್ಲಿ ಲಂಬಾಣಿಗಳ ಆರ್ಥಿಕ ಸ್ಥಿತಿಗತಿಗಳು ಉತ್ತಮವಾಗಿದ್ದ ರಿಂದ ಅವರ ಮಹಿಳೆಯರ ಉಡುಪು ಹೆಚ್ಚು ಹೆಚ್ಚು ಅಲಂಕೃತವಾದವು ವಿವಿಧ ವಿನ್ಯಾದ ಕಸೂತಿ ಹಾಕುವ ಪದ್ಧತಿ ರೂಢಿಗತವಾಯಿತು ಗಾಜು ಗೋಡೆಯ ಗುಂಡಿ ಬಣ್ಣ ಬಣ್ಣದ ಚಿಕ್ಕ ಚಿಕ್ಕ ತುಂಡುಗಳನ್ನ ಜೋಡಿಸಿ ತಮ್ಮ ವಸ್ತ್ರಗಳನ್ನು ಅಲಂಕರಿಸಿಕೊಂಡರು.

'ಕಸೂತಿ' ಎಂಬ ಕನ್ನಡ ಅರ್ಥಕ್ಕೆ ಸಮಾನ ಅರ್ಥ ಕೊಡುವ 'ಖೀಲಣ್' ಮತ್ತು ತೂಣ್ ಎಂಬೆರಡು ಪದಗಳು ಲಂಬಾಣಿ ಭಾಷೆಯಲ್ಲಿ ಬಳಕೆಯಲ್ಲಿವೆ ಈ ಜನರಲ್ಲಿ ಕಸೂತಿ ಪ್ರಾರಂಭವಾದ ದಿನಗಳಲ್ಲಿ ಎರಡು ಪದಗಳು ಬೇರೆ ಬೇರೆ ಕಸೂತಿ ಪ್ರಕಾರಗಳನ್ನು ಸೂಚಿಸುತ್ತಿದ್ದಿರಬೇಕು ಸಣ್ಣ ಸಣ್ಣ ಗಾಜಿನ ತುಂಡು ಗೋಂಡೇಯ ಗುಂಡಿ ಮೊದಲಾದ ಅಲಂಕಾರದ ವಸ್ತುಗಳನ್ನು ಬಳಸಿ ಉಡುವ ಬಟ್ಟೆಗಳ ಮೇಲೆ ಹಾಕಿ ಕೊಳ್ಳುತ್ತಿದ್ದ ಸುಂದರ ಹೆಣೆಗೆ 'ತೂಣ್' ಎಂದು ಕೇವಲ ಬಣ್ಣದ ದಾರಗಳನ್ನು ಮಾತ್ರ ಬಳಸಿ ವಿಶೇಷವಾಗಿ ಬಳಕೆಯಾಗುವ ವಸ್ತುಗಳ ಮೇಲೆ ಹಾಕುತ್ತಿದ್ದ ಹೆಣೆಗೆಯನ್ನು 'ಖೀಲಣ್' ಎಂದು ಕರೆದು ಕೊಂಡಿರಬೇಕು ಈ ಎರಡು ವಿಧಾನಗಳು ಕಸೂತಿಗೆ ಸಂಬಂಧಿಸಿರುವುದರಿಂದ ಮತ್ತು ಅವುಗಳ ನಡುವಿನ ಅಂತರವು ಕಡಿಮೆಯಿರುವುದರಿಂದ ಕಾಲಕ್ರಮೇಣ 'ಖೀಲಣ್' ಎಂಬ ಪದವು ಪ್ರಸಿದ್ದವಾಗಿ ಇಂದಿಗೂ ಬಳಕೆಯಲ್ಲಿದೆ ಲಂಬಾಣಿಯ ಖೀಲಣ್ ಪದಕ್ಕೆ ಕನ್ನಡದ ಕಸೂತಿ ಪದವು ಪರ್ಯಾಯವಾಗುವುದರಿಂದ ಮುಂದೆ ಕಸೂತಿ ಪದವನ್ನು ಬಳಸಲಾಗಿದೆ.

ಲಂಬಾಣಿ ಮಹಿಳೆಯರು ತಾವೇ ಕಸೂತಿ ಹಾಕಿ ಸಿದ್ದಪಡಿಸಿದ ಉಡುಪುಗಳನ್ನು ಧರಿಸುತ್ತಾರೆ ಈ ಮಹಿಳೆಯರಿಗೆ ಕಸೂತಿ ಕಲೆಯು ರಕ್ತಗತವಾಗಿ ಬಂದಿದೆ ಹುಟ್ಟುವ ಮಗುವು ೮ ರಿಂದ ೧೦ ವರ್ಷ ವಾಗುತ್ತಿದ್ದಂತೆ ತನ್ನ ತಾಯಿಯೊಂದಿಗೆ ಸ್ರಜಿಯನ್ನ ಹಿಡಿದುಕೊಂಡು ಕಸೂತಿಹಾಕಲು ಪ್ರಾರಂಭಿಸುತ್ತಾಳೆ ಹತ್ತು ವರ್ಷದ ಹೆಣ್ಣು ಕೂಸು ಮಹಿಳೆಯರ ಉಡುಪಿನ ಕೆಲವು ಸಣ್ಣ ಸಣ್ಣ ಭಾಗಗಳಿಗೆ ಸ್ವತಂತ್ರವಾಗಿ ಕಸೂತಿ ಹಾಕುವುದನ್ನು ಕಲಿಯುತ್ತಾಳೆ ೧೨ ವರ್ಷ ತುಂಬುತ್ತಲೇ ತಮ್ಮ ಉಡುಪಿನ ಮೇಲೆ ಸುಂದರವಾದ ಕಸೂತಿಯನ್ನು ಹಾಕುವ ಪರಿಣಿತಿಯನ್ನು ಪಡೆದಿರುತ್ತಾಳೆ.

ಲಂಬಾಣಿ ಮಹಿಳೆಯರು ಕಸೂತಿಗೆ ಬಳಸುವ ಚಿತ್ರಗಳಿಗೆ ಪ್ರಕೃತಿಯೇ ಪ್ರೇರಣೆ ಪ್ರಕೃತಿಯಲ್ಲಿನ ಗಿಡ ಮರ ಬಳ್ಳಿ ಪರಿಚಿತ ಪ್ರಾಣಿಲೋಕ ಅವರ ಕಸೂತಿಯಲ್ಲಿ ಜೀವ ತಳೆಯುತ್ತವೆ. ಅವರ ಕಸೂತಿಯ ನಾನಾವಿಧಗಳನ್ನು ಪರಿಚಯಿಸಿ ಕೊಳ್ಳಲು ಈ ಕೆಳಕಂಡ ಕೆಲವು ವಿನ್ಯಾಸಗಳನ್ನು ಗುರುತಿಸಬಹುದಾಗಿದೆ.

**ಲಂಬಾಣಿ ಕಸೂತಿ ಕಲೆಗಳಲ್ಲಿನ ವಿಧಗಳು**

ಲಂಬಾಣಿ ಕಸೂತಿ ಕಲೆಗಳು ದೇಶದಾದ್ಯಂತ ಪ್ರಸಿದ್ಧ ಪಡೆದಿವೆ. ಇದರಲ್ಲಿ ಮಹಿಳೆಯರು ದೇಶ ವಿದೇಶಗಳ ಪ್ರಾವಸಿಗರು ಈ ಕಸೂತಿ ಕಲೆಯಿಂದ ತಯಾರಿಸಿದ ಬ್ಯಾಗ್‌ಗಳು, ಲಂಗ ಚೋಲಿಗಳು, ಪರ್ಸ್‌ಗಳು ಬಾಗಿಲು ಪರದೆಗಳು ದೇಶ ವಿದೇಶಗಳಲ್ಲಿ ಪ್ರಖ್ಯಾತಿಯನ್ನು ಪಡೆದಿವೆ ಇದರಲ್ಲಿ ಯಾವುದೇ ಪುರುಷನ ಸಹಾಯವಿಲ್ಲದೆ ಮಹಿಳೆ ತನ್ನ ಸ್ವಂತ ಖರ್ಚಿನಲ್ಲಿ ಕಸೂತಿಯನ್ನು ಮಾಡಿದ ನಂತರ

ಅವುಗಳ ಮಾರಾಟ ಮಾಡಿ ಅದರಿಂದ ಜೀವನ ನಡೆಸುವಂಥ ಎಷ್ಟೋಜನ ಮಹಿಳೆಯರು ಲಂಬಾಣಿಗರೆಲ್ಲ ನಮಗೆ ಸಿಗುತ್ತಾರೆ. ಮತ್ತು ಈ ಕಸೂತಿ ಕಲೆಯಲ್ಲಿ ಮುಖ್ಯವಾದ ಕಸೂತಿ ಕಲೆಗಳು ಈ ಕೆಳಗಿನಂತೆ ವಿವರಿಸಲಾಗಿದೆ.

**ರೇಲೋಪೆರೋನೋ**

ಈ ಕಸೂತಿಯು ಬಳ್ಳಿಯನ್ನು ಹೋಲುವ ಕಸೂತಿಯಾಗಿದೆ ಇದನ್ನು ಗಾಗ್ರಾದ ಮೇಲೆ ಹೆಣೆಯಲಾಗುತ್ತದೆ. ಬಳ್ಳಿಯಾಕಾರದ ಈ ವಿನ್ಯಾಸದಲ್ಲಿ ಎರಡರಿಂದ ಮೂರು ಇಂಚುಗಳು ಅಂತರದಲ್ಲಿ ಕನ್ನಡಿಗಳ್ನನು ಸೇರಿಸಿ ಹೆಣೆದಿರುತ್ತಾರೆ. ಅವರ ಉಡುಪುಗಳ ಮೇಲೆಯೂ ಈ ವಿನ್ಯಾಸದ ಕಸೂತಿಯ ಬಳಕೆಯು ಹೆಚ್ಚಾಗಿರುತ್ತದೆ. ಈ ಕಸೂತಿಯಲ್ಲಿ ಕೆಂಪು, ಹಳದಿ ಬಣ್ಣದ ದಾರಗಳನ್ನು ಬಳಸುತ್ತಾರೆ. ಲಂಬಾಣಿ ಮಹಿಳೆಯರು ಹಾಕುವ ಕಸೂತಿಯಲ್ಲಿ ಇದು ಹೆಚ್ಚು ಸಂಕೀರ್ಣವಾಗಿರುತ್ತದೆ.

**ಬಕ್ಯಾ ತೋಡೇರೋ**

ಈ ಬಗೆಯ ಕಸೂತಿಯು ಚಿಕ್ಕ ಚಿಕ್ಕ ಚುಕ್ಕೆಗಳ ಸಾಲಿನಾಕಾರದಲ್ಲಿ ಇರುತ್ತದೆ. ಕೆಲವು ಕಡೆಗಳಲ್ಲಿ ಒಂದು ಸಾಲಿನ ಚುಕ್ಕೆಗಳಿದ್ದರೆ ಮತ್ತೆ ಕೆಲವು ಕಡೆಗಳಲ್ಲಿ ಬೇರೆ ಬೇರೆ ಬಣ್ಣದ ದಾರಗಳನ್ನು ಬಳಸಿ ಮೂರು ಸಾಲುಗಳವರೆಗೆ ಇರುತ್ತದೆ. ರೋಲೋ ವಿನ್ಯಾಸದ ಎರಡು ಪಕ್ಕದಲ್ಲಿ ಈ ಬಕ್ಕಾ ವಿನ್ಯಾಸದ ಸಾಲುಗಳಿದ್ದು ಅದರ ಮೇಲೆ 'ಮೊಕ್ಕಿ' ಎಂಬ ಕಸೂತಿಯನ್ನು ಹಾಕಿರುತ್ತಾರೆ. ಬಕ್ಕಾ ಕಸೂತಿಯು ರೇಲೋ ಕಸೂತಿಯಷ್ಟೇ ಮುಖ್ಯವಾಗಿದ್ದರು. ಇದು ಸರಳವಾದ ಹೆಣೆಗೆಯಾಗಿರುತ್ತದೆ.

**ಮಾಕ್ಕಿ**

ಲಂಬಾಣಿ ಭಾಷೆಯಲ್ಲಿ 'ಮಾಕ್ಕಿ' ಎಂದರೆ ನೊಣ ಎಂಥರ್ಥ ಈ ಕಸೂತಿ ವಿನ್ಯಾಸವು ಚಿಕ್ಕದಾಗಿದ್ದು ನೊಣದಾಕಾರವನ್ನು ಹೋಲುವುದರಿಂದ ಇದಕ್ಕೆ ಮಾಕ್ಕಿ ಎಂದು ಕರೆದಿರ ಬೇಕು ಎಂದು ಹೇಳಬಹುದಾಗಿದೆ. ರೋಲೋ ಬಕ್ಕಾ ಮೊದಲಾದ ಸಂಕೀರ್ಣ ಕಸೂತಿಗಳ ಮೇಲೆ ಮೊಕ್ಕಿಹಾಕಿ ಅಲಂಕರಿಸುತ್ತಾರೆ. ಬೇರೆ ಬೇರೆ ಬಣ್ಣದ ದಾರಗಳನ್ನು ಬಳಸಿ ಈ ವಿನ್ಯಾಸವನ್ನು ಹೆಚ್ಚು ಆಕರ್ಷಣಿಯವಾಗಿ ಮಾಡಿರುತ್ತಾರೆ. ಅಲಂಕಾರ ಮಾಡಬೇಕಾದ ಬಹು ಭಾಗಗಳಲ್ಲಿ ಈ ವಿನ್ಯಾಸವನ್ನು ಬಳಸುತ್ತಾರೆ.

**ನಕರಾ**

ನಕರಾ ಎಂದರೆ ಹಿಂದಿ ಭಾಷೆಯಲ್ಲಿ ಮೊಸಳೆ ಎಂದಾಗುತ್ತದೆ. ಈ ಬಗೆಯ ಕಸೂತಿಯು ಮೊಸಳೆಯಾಕಾರದಲ್ಲಿರುವುದರಿಂದ ಇದನ್ನು ನಕರಾ ಎಂದು ಕರೆದಿರಬೇಕು. ನಕರಾ ಕಸೂತಿಯು ಬಕ್ಕಾ ಕಸೂತಿಯ ಸಾಲಿನ ಮಧ್ಯದಲ್ಲಿ ಬೇರೆ ಬೇರೆ ಬಣ್ಣದ ದಾರಗಳಿಂದ ಕೂಡಿಸುತ್ತದೆ.

**ಭುರ್‍ಯಾ**

ಬುರ್‍ಯಾ ಎಂದರೆ ಲಂಬಾಣಿ ಮಹಿಳೆಯರು ಮೂಗಿನಲ್ಲಿ ಧರಿಸುವ ವೃತ್ತಕಾರದ ಆಭರಣವಾದ ಸುತ್ತು. ಈ ಬಗೆಯ ಕಸೂತಿಯ ಬಣ್ಣ ಬಣ್ಣದ ದಾರಗಳನ್ನು ಬಳಸಿ ಸುಂದರವಾದ ವೃತ್ತ ವಿನ್ಯಾಸದಿಂದ ಕೂಡಿರುತ್ತದೆ. ಭುರ್‍ಯಾ ಕಸೂತಿಯ ವಿಶಿಷ್ಟವೆಂದರೆ ಉಳಿದ ಕಸೂತಿಗಳಂತೆ ಇವುಗಳನ್ನು ನಿರ್ದಿಷ್ಟವಾದ ಜಾಗಗಳಲ್ಲಿ ಹೆಣೆಯಬೇಕೆಂಬ ನಿಯಮವಿಲ್ಲ ಉಡುಪುಗಳ ಮೇಲೆ ಹೆಚ್ಚು ಕಸೂತಿಗಳಿಲ್ಲದ ಕಡೆಗಳಲ್ಲಿ ಖಾಲಿ ಜಾಗವಿದ್ದ ಕಡೆ ಭುರ್‍ಯಾ ಕುಸೂತಿಯನ್ನು ಹಾಕುತ್ತಾರೆ.

**ಕಟ್ಟಾ ಮೋಡೇರೋ**

ಲಂಬಾಣಿ ಮಹಿಳೆಯರು ಕತ್ತರಿಸಿ ಅಚ್ಚು ಕಟ್ಟಾಗಿ ಸಿದ್ದಪಡಿಸಿದ ಹಲವಾರು ತುಂಡು ಬಟ್ಟೆಗಳನ್ನು ಜೋಡಿಸಿ ಉಡುಪುಗಳ ಮೇಲೆ ಹೆಣೆಯುತ್ತಾರೆ. ಬಟ್ಟೆಗಳ ಅಂಚುಗಳಲ್ಲಿ ಒಂದು ಇಂಚು ಅಗಲವುಳ್ಳ ಬಿಳಿಯ ಬಟ್ಟೆಯ ಮೇಲೆ ಬಿಳಿಯ ಗೋಪುರಗಳ ಸಾಲಿನಂತೆ ಸುಂದರವಾಗಿ ಕಾಣುತ್ತದೆ ಈ ಗೋಪುರಗಳ ತುದಿಯ ಮೇಲೆ ಕೆಂಪು ಅಥವಾ ಹಳದಿ ಬಣ್ಣದ ದಾರಗಳಿಂದ ಸುಂದರವಾದ ಚೌಕಾಕೃತಿಯ ಕಸೂತಿ ಇರುತ್ತದೆ. ಇದನ್ನು ಕಟ್ಟಾ ಮೋಡೇರೋ ಎನ್ನುತ್ತಾರೆ.

**ಧಾರ್ಮಿಕ ವಿಧಿ ವಿಧಾನಗಳು**

ಲಂಬಾಣಿಗರು ಸಾಮಾನ್ಯವಾಗಿ ಶಕ್ತಿ ದೇವತೆಗಳ ಉಪಾಸಕರು ಮರಿಯಮ್ಮ ಕರಿಯಮ್ಮ ದುರ್ಗಮ್ಮ ಕಂಕಾಳಿ (ಚಾಮುಂಡಿ) ವಾಗ್ವಾಯಿ (ಹುಲಿಗೆಮ್ಮ) ಮೊದಲಾದ ಶಕ್ತಿದೇವತೆಗಳನ್ನು ಹಾಗೂ ಸೇವಾ ಭಾಯಾ ಬಾಲಾಜಿ (ತಿರುಪತಿ ವೆಂಕಟೇಶ) ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಅಲ್ಲದೆ ಅವರು ಶಿವ ವಿಷ್ಣು ರಾಮಕೃಷ್ಣ ಮೊದಲಾದ ಹಿಂದೂ ದೇವರುಗಳನ್ನು ಪೂಜಿಸುತ್ತಾರೆ.

ಲಂಬಾಣಿ ಜನ ಸಮುದಾಯಗಳು ವಾಸಿಸುವ ಪ್ರತಿಯೊಂದು ತಾಂಡಗಳಲ್ಲಿ ಪ್ರಮುಖವಾಗಿ ಸೇವಾಭಾಯಾ ಮತ್ತು ಮರಿಯಮ್ಮನ ದೇವಸ್ಥಾನಗಳಿರುತ್ತವೆ. ಲಂಬಾಣಿಗರು ಎಲ್ಲಿಯೇ ಹೋದರು ಅವರನ್ನು ಸ್ಮರಿಸುತ್ತಾರೆ. ಇವರು ವಾಸಿಸುವ ಪ್ರದೇಶಗಳಲ್ಲಿ ದೇವಸ್ಥಾನಗಳ ಎದುರಿನಲ್ಲಿ ಕೆಂಪು ಹಾಗೂ ಬಿಳಿ ಬಣ್ಣದ ಎರಡು ನಿಶಾನೆದ್ವಜಗಳಿರುತ್ತಾವೆ. ಕೆಂಪು ನಿಶಾನೆ ಮರಿಯಮ್ಮನದು ಬಿಳಿಯ ನಿಶಾನೆ ಸೇವಾಬಾಯಾನದು ಇವೆರಡೂ ನಿಶಾನೆಗಳು ಲಂಬಾಣಿಗರ ಎಲ್ಲ ತಾಂಡಾಗಳಲ್ಲಿ ಇರುತ್ತವೆ. ಇವುಗಳಿಂದ ಪಿಡುಗು ಕಾಲರಾ ಬರುವುದಿಲ್ಲವೆಂದು ನಂಬಿಕೆ ಇದೆ.

ಹಲವಾರು ಶತಮಾನಗಳಿಂದ ಮತ್ತು ಹಿಂದೂಗಳಿಂದ ಪ್ರಭಾವಿತರಾದ ಲಂಬಾಣಿ ಬುಡಕಟ್ಟಿನವರು ಹಿಂದೂ ಧರ್ಮವನ್ನಷ್ಟೇ ಅನುಸರಿಸಿದ್ದರೂ ಅಲ್ಲಲ್ಲಿ ತಮ್ಮದೇ ಆದ ಸಂಸ್ಕೃತಿಯ ಕುರುಹು ಬೀರುತ್ತದೆ ಅವರ ಆಚಾರ ಪದ್ದತಿಗಳಲ್ಲಿ ಭಿನ್ನತೆಗಳು ಕಂಡು ಬರುತ್ತವೆ. ಇತರ ಎಲ್ಲ ಭಾರತೀಯ ಸಮಾಜಗಳಲ್ಲಿರುವಂಥ ಲಂಬಾಣಿಗರಲ್ಲಿಯೂ ಪ್ರತಿಯೊಂದು ತಾಂಡಾಗಳಲ್ಲಿಯೂ ದೇವಾಲಯಗಳು ಹಾಗೂ ಅದಕ್ಕೊಬ್ಬ ಗುರು(ಭಾಗತ್)ಇರುತ್ತಾರೆ. ಸ್ವರ್ಗನರಕ ಪಾಪ ಪುಣ್ಯಗಳಲ್ಲಿ ಅವರಿಗೆ ನಂಬಿಕೆ ಇದೆ ಭವಿಷ್ಯದಲ್ಲಿ ಅವರಿಗೆ ಅಪಾರವಾದ ನಂಬಿಕೆ ಇದೆ.

ಮಳೆ ಬೆಳೆ ರೋಗ ರುಜಿನಗಳಿಗೆ ಭಾಗತ್ ಸಾದು ಸಂತರ ಹೇಳಿಕೆಯನ್ನು ಆಶ್ರಯಿಸುತ್ತಾರೆ. ಪರಂಪರೆಯಿಂದ ಬಂದ ಧಾರ್ಮಿಕ ಶ್ರದ್ಧೆಯೇ ಅವರ ಬಾಳಿಗೆ ಆಧಾರ ಜೀವನದಲ್ಲಿ ಬರುವ ಕಷ್ಟ ಸುಖಗಳಿಗೂ ಒಳಿತು ಕೆಡುಕುಗಳೂ ಮೂಲಭೂತವಾದ ಅಗೋಚರ ಶಕ್ತಿಯೊಂದಿದೆ ಅದರ ಇಚ್ಛೆಯ ಅನುಸಾರವಾಗಿ ಎಲ್ಲವೂ ನಡೆಯುತ್ತದೆ ಆ ಶಕ್ತಿಯ ವಿರುದ್ಧ ಹೋಗುವುದು ಅಸಾಧ್ಯ ಎಂಬುದನ್ನು ಲಂಬಾಣಿಗರು ಕಂಡು ಕೊಂಡಿದ್ದಾರೆ.

ಲಂಬಾಣಿಗರು ಕಡು ಬಡವರಾದರೂ ಅವರ ಸಂಪ್ರದಾಯಗಳು ಬಡತನದಿಂದ ಕೂಡಿಲ್ಲವಾಗಿದೆ ಆಚರಣೆ ಸಂಪ್ರಾದಯಗಳಲ್ಲಿ ತುಂಬಾ ಕಟ್ಟು ನಿಟ್ಟಾದ ಜನ ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಸಮಾಜದಲ್ಲಿ ನಡೆಯುವ ಯಾವ ಕಾರ್ಯಕ್ಕೂ ಪೂಜೆ ಪುರಸ್ಕಾರಗಳಿಗೂ ಹಬ್ಬ ಆಚರಣೆಗಳಿಗೂ ಕೊರತೆಯಾಗದಂತೆ ಸಾಲಮಾಡಿಕೊಂಡಾದರು ಆಚರಿಸುತ್ತಾರೆ. ವರ್ಷದಲ್ಲಿ ಒಂದೆರಡು ಸಲವಾದರು ಪ್ರತಿಯೊಬ್ಬರೂ ತಮ್ಮ ಮನೆ ದೇವರು ಮನೆ ದೇವತೆಗಳಿಗೆ ಇಲ್ಲವೆ ಪೂರ್ವಜರಿಗೆ ಬಲಿಕೊಟ್ಟು ಶಾಂತಿ ಮಾಡಬೇಕು, ಇಲ್ಲದೆ ಹೋದಲ್ಲಿ ತಮ್ಮ ಮನೆ ಮತ್ತು ತಾಂಡಾಗಳಲ್ಲಿ ಇಲ್ಲದ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಎಂದು ನಂಬುತ್ತಾರೆ. ಒಂದೋಂದು ನಿರ್ದಿಷ್ಟವಾದ ರೋಗಗಳಿಗೆ ಒಂದೊಂದು ದೇವತೆಗಳಿರುತ್ತವೆ ಆಯಾ ದೇವರುಗಳಿಗೆ ಬಲಿಯನ್ನರ್ಪಿಸುತ್ತಾರೆ. ಮಾಂಸಹಾರಿಗಳಾದ ಲಂಬಾಣಿಗರು ವಾರಕ್ಕೊಂದು ದಿನವಾದರೂ ತಮ್ಮ ಮನೆ ದೇವರುಗಳಿಗೆ ಸಂಬಂಧ ಪಟ್ಟಂತೆ ಮಾಂಸವನ್ನು ತ್ಯಜಿಸುತ್ತಾರೆ. ಮಾಂಸವನ್ನು ಅಡುಗೆ ಮನೆಯಲ್ಲಿ ಬೇಯಿಸುವಂತಿಲ್ಲ

ಮನೆಯ ಹೊರಗೆ ಒಲೆ ಹೂಡಿ ಅಲ್ಲಿಯೇ ಬೇಯಿಸಿ ತಿಂದು ಸ್ವಚ್ಛ ಗೊಳಿಸುತ್ತಾರೆ. ಸ್ತ್ರೀಯರು ಮುಟ್ಟಾದ ಸಂಧರ್ಭದಲ್ಲಿ ಬಹಳಷ್ಟು ಕಟ್ಟು ನಿಟ್ಟಾಗಿ ಪಾಲಿಸಿಕೊಳ್ಳುತ್ತಾರೆ. ಅಂಥಸ್ತ್ರೀಯರಿಗೆ ಅಡುಗೆ ಮನೆ ದೇವರ ಮನೆಗಳಲ್ಲಿ ಪ್ರವೇಶವಿಲ್ಲ ನಾಲ್ಕುದಿನ ಪ್ರತ್ಯೇಕವಾಗಿಯೇ ಉಳಿದುಕೊಳ್ಳಬೇಕು.

ಲಂಬಾಣಿಗರು ತಮ್ಮ ಮಕ್ಕಳಿಗೆ ಕಾಯಿಲೆ ಕಾಣಿಸಿ ಕೊಂಡರೆ ಗಣಜಲಿ ಗೊಬ್ಬರ ಮೊದಲಾದವುಗಳು ಕಾಣಿಸಿಕೊಂಡರೆ ದೇವರು ದೇವತೆಗಳ ಶಾಪವೆಂದು ತಿಳಿಯುತ್ತಾರೆ. ಈ ಶಾಪ ವಿಮೋಚನೆಗಳಿಗೆ ಅವರು ಆಯಿವಾಳೋ (ಸೇವಾಬಾಯಿ) ನೀತಲಾಮಾತಾ, ಕಂಕಾಳಿ ದುರ್ಗಮ್ಮ ಈ ದೇವತೆಗಳಿಗೆ ಕುರಿ ಕೋಳಿ ಬಲಿಕೊಟ್ಟು ಶಾಂತಿ ಮಾಡುವುದರಿಂದ ಚಿಕ್ಕ ಮಕ್ಕಳ ಕಾಯಿಲೆ ವಾಸಿಯಾಗುವುದೆಂದು ಭಾವಿಸುತ್ತಾರೆ. ಸೃಷ್ಟಿಯ ಚರಾಚರ ವಸ್ತುಗಳ ವ್ಯಾಪಾರಕ್ಕೆ ಹೀಗಾಗಿ ಲಂಬಾಣಿಗರು ಅವನನ್ನು ಪೂಜೆ ಪುನಸ್ಕಾರ ವ್ರತ ಹರಕೆಗಳ ಮೂಲಕ ಆಗಾಗ ತೃಪ್ತಿ ಪಡಿಸುತ್ತಾರೆ. ವ್ಯಕ್ತಿಗೆ ರೋಗ ರುಜಿನಗಳು ಕಾಣಿಸಿಕೊಂಡಾಗ ಭಾಗತ್ ಸಾಧು ಸಂತರ ಬಳಿಗೆ ಹೋಗಿ ಶಕುನ ಕೇಳುತ್ತಾರೆ ಅದಕ್ಕೆ ಪರಿಹಾರವನ್ನು ಕೇಳುತ್ತಾರೆ ತಾವು ಹಿಂದೆ ಮಾಡಿಕೊಂಡಿರುವ ಪ್ರತಿ ಹರಕೆಗಳನ್ನು ಜ್ಞಾಪಿಸಿಕೊಂಡು ಮತ್ತೆ ದೇವರ ಮೊರೆ ಹೋಗುತ್ತಾರೆ.

**ಕೌದಿ ಹೆಣಿಕೆ**

ಮಹಿಳೆಯು ಬಹಳ ಹಿಂದಿನ ಕಾಲದಿಂದಲೂ ಕೌದಿ ಎಣಿಕೆಯಲ್ಲಿ ತನ್ನ ಕೌಶಲ್ಯವನ್ನು ಗುರುತಿಸಿಕೊಂಡಿದ್ದಾಳೆ ಎಂದು ಹೇಳಬಹುದಾಗಿದೆ. ಇಲ್ಲಿ ಮಹಿಳೆಯು ಯಾವ ಪುರುಷನ ಸಹಾಯ ಸಹಕಾರಗಳಿಲ್ಲದೆ ಮಹಿಳೆಯೊಬ್ಬಳೆ ಎಣಿಕೆಯನ್ನು ಮಾಡಿ ಕೌದಿಯನ್ನು ತಯಾರಿಸುವ ಒಂದು ಕೌಶಲ್ಯದಿಂದಲೆ ಮಹಿಳೆಯು ಗುರುತಿಸಿಕೊಂಡಿದ್ದಾಳೆ.

ಮೊದಲನೆಯದಾಗಿ ದೊಡ್ಡ ಬಟ್ಟೆಗಳ ತುಂಡುಗಳನ್ನು ಕೆಳಗಡೆ ಹೊಂದಿಸಿಕೊಳ್ಳುತ್ತಾರೆ ನಂತರ ಅದರ ಮೇಲೆ ಚಿಕ್ಕ ತುಂಡನ್ನು ಹಾಕಿ ಅದರ ಮೇಲೆ ಮತ್ತೆ ದೊಡ್ಡ ತುಂಡಗಳನ್ನು ಹೊಂದಿಸುತ್ತಾರೆ ನಂತರ ದೂರದೂರ ಎರಡು ಗೇಣಿಗೊಂದುರಂತೆ ಹೋಲಿಗೆ ಹಾಕತ್ತಾರೆ ಕೋನೆಗೆ ಆ ಬಟ್ಟೆಯ ಅಂಚನ್ನು ಒಳಭಾಗಕ್ಕೆ ಮಡಚಿ ಸುತ್ತಲೂ ಹೋಲಿಗೆ ಹಾಕುತ್ತಾರೆ ಇದರಲ್ಲಿ ಮೇಲ್ಪದರದ ಬಟ್ಟೆಗಳನ್ನು ಬಹಳ ಆಕರ್ಷಕವಾಗಿ ಕಾಣುವಂತೆ ಹೊಂದಿಸುತ್ತಾರೆ ಎಷ್ಟೆ ಚಿಕ್ಕ ತುಂಡುಗಳಿದ್ದರು ಅವುಗಳನ್ನು ಕ್ರಮಬದ್ಧವಾಗಿ ಜೋಡಿಸುತ್ತಾರೆ. ಕೊನೆಗೆ ದೂರದೂರದಲ್ಲಿ ಹಾಕಿದ ದಾರವನ್ನು ಬಿಚ್ಚಿಡುತ್ತಾರೆ ಈ ರೀತಿಯಾಗಿ ಕೌದಿಯು ಬಹಳ ಅಕರ್ಷಕವಾಗಿ ಕಾಣಿಸುವುದು.

ಮಹಿಳೆಯು ಕೌದಿ ಎಣಿಕೆಯಲ್ಲಿ ತನ್ನ ಕೌಶಲ್ಯವನ್ನು ತುಂಬಾ ಅತ್ಯುತ್ತಮವಾಗಿ ತೋರ್ಪಡಿಸುತ್ತಾರೆ. ಎಲ್ಲಾ ತಂತ್ರಜ್ಞಾನಗಳಲ್ಲಿ, ಕೈಮಗ್ಗ ಕೇಂದ್ರಗಳಲ್ಲಿ ಹೊಸ ವಸ್ತುಗಳನ್ನು ಬಳಸಿ ಬಣ್ಣಗಳು, ದಾರಗಳು, ರೇಶ್ಮೆಗಳು ಉಣ್ಣೆಗಳು ಇನ್ನಿತರೆ ಯಂತ್ರೋಪಕರಣಗಳು ಎಲ್ಲ ಬಳಸಿದರೂ ಕೂಡ ಅವು ಮಬಾರಿಯುತ

ಹಾಸಿಗೆಗಳಾಗಿರುತ್ತವೆ ಮತ್ತು ಇವುಗಳು ಬಡವರ ಕೈಗೆ ಎಟುಕದ ಸ್ಥಿತಿಯಲ್ಲಿರುತ್ತವೆ. ಅದರೆ ಇಲ್ಲಿ ಚಳಿಗಾಲದಲ್ಲಿ ಚಳಿಯಿಂದ ರಕ್ಷಿಸಿಕೊಳ್ಳಲು ಜನಸಾಮಾನ್ಯರು ಕೌದಿಯನ್ನು ಹೆಚ್ಚಾಗಿ ಬಳಸುತ್ತಾರೆ. ಎಂದು ತಿಳಿದುಬರುತ್ತದೆ. ಏಕೆಂದರೆ ಇವುಗಳು ಅತಿ ಕಡಿಮೆ ಬೆಲೆಯಲ್ಲಿ ತಯಾರಾಗುತ್ತವೆ. ಇಲ್ಲಿ ಕೌದಿ ಹೊಲೆಯುವ ಕೂಲಿ ಮಾತ್ರವೇ ಹೊರತು ಇತರೆ ಯಾವುದೇ ರೀತಿಯ ಖರ್ಚುಗಳು ಇಲ್ಲಿ ಬರುವುದಿಲ್ಲವಾಗಿದೆ ಕೌದಿ ಮನೆಯಲ್ಲಿನ ಹಳೆಯ ಬಟ್ಟೆಗಳ ಮೇಲೆ ಎಷ್ಟು ದೊಡ್ಡದಾಗುತ್ತದೆ ಎಂದು ತಿಳಿದುಕೊಳ್ಳಬಹುದಾಗಿದೆ. ಇದರಿಂದ ಮಹಿಳೆಯು ದೊಡ್ಡ ಬಟ್ಟೆಗಳನ್ನು ಕೆಳಗಡೆ ಹಾಕಿ ಅವುಗಳ ಮೇಲೆ ಚಿಕ್ಕಪುಟ್ಟ ಬಟ್ಟೆಗಳನ್ನೆ ಜೋಡಿಸಿಕೊಂಡು ಎರಡು ಗೇಣಿಗೆ ತಕ್ಕಂತೆ ಹೊಲಿಗೆಗಳನ್ನು ಹಾಕಿಕೊಂಡು ನಂತರ ಕೌದಿಯನ್ನು ಹೊಲಿಯಲು ಪ್ರಾರಂಭಿಸುತ್ತಾಳೆ. ಇಲ್ಲಿ ಮಹಿಳೆಯು ನಿರುಪಯುಕ್ತ ಬಟ್ಟೆಗಳನ್ನು ಜೋಡಿಸಿ ಹೊಲೆದು ಆ ನಿರುಪಯುಕ್ತ ಬಟ್ಟೆಗಳನ್ನು ಇಲ್ಲಿ ಉಪಯುಕ್ತ ಬಟ್ಟೆಗಳನ್ನಾಗಿ ಮಾಡಿ ಒಟ್ಟುಗೂಡಿಸಿ ಒಂದು ಅಂದವಾದ ಬಣ್ಣಬಣ್ಣದ ಖೌದಿಯನ್ನು ಹೆಣೆಯುವ ಕೌಶಲ್ಯವನ್ನು ಮಹಿಳೆಯು ಹೊಂದಿದ್ದಾಳೆ. ಎಂದು ಹೇಳಬಹುದಾಗಿದೆ.

**೨.೩.೩ ಕುಂಬಾರಿಕೆ**

೧. ಪ್ರಾಚೀನ ಕಾಲದಿಂದಲೂ ಸುಮಾರು ಮೂರು ಸಾವಿರ ವರ್ಷಗಳಿಂದಲೂ ಇನ್ನೂ ಜೀವಂತವಾಗಿ ಉಳಿದಿರುವುದು ಮನುಷ್ಯನ ಬದುಕಿಗೆ ಕುಂಬಾರಿಕೆಯು ಎಷ್ಟರ ಮಟ್ಟಿಗೆ ಉಪಯುಕ್ತತೆ ಇದೆ ಎಂದು ತಿಳಿದು ಬರುತ್ತದೆ. ಮನುಷ್ಯನ ಅತ್ಯಂತ ಪ್ರಾಚೀನ ಕಲೆಗಳಲ್ಲಿ ಕುಂಬಾರಿಕೆ ಕಲೆಯೂ ಒಂದಾಗಿದೆ. ಕುಂಬಾರಿಕೆಯು ಶುದ್ಧ ಪರಿಪೂರ್ಣವಾದ ಕಲೆ ಎಂದು ಸರ್ ಹರ್‌ಬರ್ಟ್ ರೀಡ್ ಹೇಳುತ್ತಾನೆ. ಪ್ರಾಚೀನ ನಾಗರಿಕತೆಯ ಉತ್ಖನನದುದ್ದಕ್ಕೂ ಗಡಿಗೆಯ ಪಳೆಯುಳಿಕೆಗಳು ಮನುಷ್ಯನ ಅಸ್ಥಿಯೊಂದಿಗೆ ಲಭ್ಯವಾಗುತ್ತಲೆ ಬಂದಿವೆ. ಬೇಟೆಯಾಡುತ್ತಾ ಅಲೆಮಾರಿಯಾಗಿದ್ದ ಪ್ರಾಚೀನ ಮಾನವನ ನವ ಶಿಲಾಯುಗಕ್ಕೆ ಬರುವಷ್ಟರಲ್ಲೇ ಬೆಂಕಿಯನ್ನು ಕಂಡುಕೊಂಡು ಮಾಂಸವನ್ನು ಬೇಯಿಸಿ ತಿನ್ನುವುದನ್ನು ಕಲಿತ. ಬೇಟೆಯಿಂದ ಬೇಸಾಯಕ್ಕೆ ಕಾಲಿಟ್ಟ ನಂತರ ಮೇಲೆ ಒಂದೆಡೆ ನೆಲೆಯೂರಿ ನಿಲ್ಲಬೇಕಾಯಿತು. ನದಿ ಬಯಲು ನೀರಿನ ತಾಣಗಳು ಆತನ ವಾಸ ಸ್ಥಾನವಾದವು ಬೇಸಾಯದಿಂದ ಪಡೆದ ಧಾನ್ಯಗಳನ್ನು ಕಾಡು–ಮೇಡು ಸುತ್ತಿ ತಂದ ಹಣ್ಣು ಹಂಪಲು ಗಡ್ಡೆ–ಗೆಣಸುಗಳನ್ನು ಸಂಗ್ರಹಿಸಿಡಲು ಮಣ್ಣಿನ ಮಡಿಕೆ ಮಾಡುವುದನ್ನು ಕಲಿತುಕೊಂಡು ಕೈಯಿಂದ ಮಾಡಿದ ಒರಟು ಒರಟಾದ ಹಸಿ ಮಣ್ಣಿನ ಪಾತ್ರೆಗಳೇ ಮೊದಲು ಬಳಕೆಗೆ ಬಂದದ್ದು ಎಂಬುದು ಪ್ರಾಚ್ಯ ಸಂಶೋಧಕರ ಅಭಿಪ್ರಾಯ. ಚಕ್ರವನ್ನು ಕಂಡು

ಕೊಂಡು ಹಸಿ ಮಡಿಕೆಗಳನ್ನು ಆವಿಗೆಯಲ್ಲಿ ಸುಟ್ಟು ಬಳಸುವ ಹಂತಕ್ಕೆ ಬರಲು ಹಲವು ನೂರು ವರ್ಷಗಳು ಕಳೆದಿರಲಿಕ್ಕೆ ಸಾಕು. ಕುಂಭ, ಕಲೆ. ಇದೊಂದು ಪ್ರಾಯೋಜಿಕ ಕಲೆ ಸಾಮಾನ್ಯವಾಗಿ ಎಲ್ಲ ಗ್ರಾಮೀಣ ಕಲೆಗಳು ಜನಪದ ಮೂಲದವುಗಳು ಅದರಲ್ಲಿ ಕುಂಬಾರಿಕೆಯೂ ಕೂಡ ಒಂದಾಗಿದೆ. ಪ್ರಪಂಚದಾದ್ಯಂತ ಎಲ್ಲೆಲ್ಲಿ ಪ್ರಾಚೀನ ಮಾನವ ನೆಲೆಯೂರಿನಿಂತನೋ ಅಲ್ಲಲ್ಲಿ ನಾಗರಿಕತೆ ಮೊಳಕೆಯೊಡೆಯಿತು. ಸಿಂದೂ ಗಂಗಾ ನದಿಯ ಬಯಲು ಯುಪ್ರೆಟಿಸ್, ಟೈಗ್ರಿಸ್ ನದಿಗಳ ಬಯಲು, ಹೊಯಂಗೋ ಹೋನದಿಯ ಬಯಲು ನೈಲ್ ನದಿಯ ಬಯಲು, ಹೀಗೆ ನದಿ ಬಯಲುಗಳ ದಡದಲ್ಲಿಯೇ ಕುಂಬ ಸಂಸ್ಕೃತಿ ಕೂಡ ಬೆಳೆದು ಬಂದಿತು. ಎಂದು ಹೇಳಬಹುದು.

ಮಾನವನು ಬೆಂಕಿಯ ಆವಿಷ್ಕಾರದ ನಂತರ ಪ್ರಾಚೀನ ಕಾಲದ ಮಾನವ ಒಂದೆಡೆ ನೆಲೆಯೂರಿದ ಮೇಲೆ ಆಹಾರವನ್ನ ಬೇಯಿಸಿ ತಿನ್ನುವುದನ್ನು ಕಲಿತ ನಂತರ ಬೇಯಿಸುವುದಕ್ಕೆ ಒಂದು ವಸ್ತುವಿನ ಅವಶ್ಯಕತೆಯನ್ನ ತಿಳಿದುಕೊಂಡು ಮಡಿಕೆಯನ್ನು ತಯಾರಿಸಲು ಅವನು ಮುಂದಾದನು. ಈ ಕಾಲದಲ್ಲಿ ಮಾನವನು ನದಿ ಬಯಲಿನ ಪ್ರದೇಶಗಳಲ್ಲಿ ಬೇಸಾಯಕ್ಕೆ ಅನುಕೂಲವಾಗುವುದಲ್ಲದೆ. ವಿಫುಲವಾಗಿ ದೊರೆಯುತ್ತಿದ್ದ ಜೇಡಿಮಣ್ಣಿನಿಂದ ಮಡಿಕೆಗಳನ್ನು ಮಾಡಲು ಕೂಡ ನೆರವಾಯಿತು. ಮಡಿಕೆ ಮಾಡುವವರೆಲ್ಲರೂ ಕುಂಬಾರರೆಂದು ಹೆಸರಿಸಲ್ಪಟ್ಟರು "ಕುಂಭಂ ಕರೋತಿ ಇತಿಃ ಕುಂಭಕಾರ"[1] ಎನ್ನುವ ಸಂಸ್ಕೃತ ನುಡಿಗಟ್ಟಿದೆ (ಕುಂಬಾರ ಜನಾಂಗ–ಬಸವರಾಜ ಕುಂಚೂರ) ಪ್ರಾಚೀನ ಕಾಲದಿಂದ ಇಂದಿನವರೆಗೆ ಕುಂಬಾರಿಕೆಯ ಪಾತ್ರ ದೊಡ್ಡದು ಕುಂಬಾರ ಜನಾಂಗ ಒಂದು ರೀತಿಯಲ್ಲಿ ನಾಗರಿಕತೆಯ ಆರಂಭದ ರುವಾರಿ ಎಂದು ಹೇಳಬಹುದು. ನವಶಿಲಾಯುಗದಿಂದ ಇಲ್ಲಿಯತನಕ ಇತಿಹಾಸದುದ್ದಕ್ಕೂ ಕುಂಬಾರಿಕೆ ಬೆಳೆಯುತ್ತಾ ಬಂದಿರುವುದು, ಅದರ ಉಪಯುಕ್ತತೆಯನ್ನು ಸಾರಿ ಹೇಳುತ್ತಿದೆ, ಎನ್ನುವ ಮಾತು ಮಡಿಕೆಯ ಚಾರಿತ್ರಿಕ ಮಹತ್ವವನ್ನು ತಿಳಿಸುತ್ತದೆ.

ಕರ್ನಾಟಕದಲ್ಲಿ ಕುಂಬಾರರು ಬೀದರ್ ನಿಂದ ಬೆಂಗಳೂರವರೆಗೆ ಕುಂಬಾರರು ಕರ್ನಾಟಕದಾದ್ಯಂತ ನೆಲೆಸಿದ್ದಾರೆ. ಇವರು ಹಳ್ಳಿ–ಹಳ್ಳಿಗಳಲ್ಲಿ ಹೆಚ್ಚಾಗಿಯೂ ಪಟ್ಟಣ ಪ್ರದೇಶಗಳಲ್ಲಿ ವಿರಳವಾಗಿಯೂ ಇರುವುದು ಕಂಡು ಬರುತ್ತದೆ. ಇವರಲ್ಲಿ ಬೇರೆ ಬೇರೆ ಭಾಷೆ ಮಾತನಾಡುವ ಬೇರೆ ಬೇರೆ ಧರ್ಮಗಳನ್ನು ಅನುಸರಿಸುವ ಬೇರೆ ಬೇರೆ ಆಚಾರ, ವಿಚಾರ, ನಡಾವಳಿಕೆಯುಳ್ಳ ಕುಂಬಾರರಿದ್ದಾರೆ. ಕರ್ನಾಟಕವು ಒಂದು ರೀತಿಯಲ್ಲಿ ಕುಂಬಾರರ "ತವರುಮನೆ" ಎಂದು ಹೇಳಬಹುದಾಗಿದೆ. ಇದೊಂದು ಕುಂಬಾರರ ಮಿನಿ ಭಾರತ–ಹಿಂದಿ ಮಾತನಾಡುವ ಉತ್ತರ ಭಾರತದ ಪ್ರಜಾಪತಿ ಕುಂಬಾರರು ಹಲವಾರ ದಶಕಗಳಿಂದ

ಕರ್ನಾಟಕದಲ್ಲಿ ನೆಲೆಸಿದ್ದಾರೆ. ತಮಿಳುನಾಡಿನ ಕುಶನವರು ಆಂದ್ರಪ್ರದೇಶದ ತೆಲುಗು ಕುಂಬಾರರು ಮಹಾರಾಷ್ಟ್ರದ ಮರಾಠಿ ಕುಂಬಾರರು, ಲಾಡಕುಂಬಾರರು, ಗುಲ್ಬರ್ಗ ಜಿಲ್ಲೆಯಲ್ಲಿ ಕನ್ನಡದ ಮನೆ ಮಾತಗಿರುವ ಹಾಲು ಕುಂಬಾರರೆಂಬ ಉಪಜಾತಿಯೂ ಇದೆ. ಗುಜರಾತಿನ ಗೊಂಬಿಕುಂಬಾರರು, ಗೋವಾದ ಕೊಂಕಣಿ ಕುಂಬಾರರು, ಕರಾವಳಿ ತೀರದ ಕುಲಾರರು, ಗುನಗರು ಧಾರ್ಮಿಕವಾಗಿ ವಿಶಿಷ್ಟ ಪಂಗಡವಾದ ಲಿಂಗಾಯತ ಕುಂಬಾರರು ಹೀಗೆ ಹಲವಾರು ಬಗೆಯ ಇಪ್ಪತ್ತು ಲಕ್ಷಕ್ಕೂ ಹೆಚ್ಚು ಕುಂಬಾರರು ಕರ್ನಾಟಕದಲ್ಲಿ ನೆಲೆಸಿದ್ದಾರೆ. ಹಾವನೂರು ವರದಿಯ ಪ್ರಕಾರ ಹಿಂದುಳಿದ ಜಾತಿಗಳ ಪಟ್ಟಿಯಲ್ಲಿ ಜನಾಂಗದ ಪಂಗಡಗಳು ಹೀಗಿವೆ.

ಕುಂಬಾರ, ಕಮ್ಮಾರ, ಖುಂಭಾರ, ಕುಂಬಾರ್, ಕುಶವನ್, ಕುಲಾಲ್(ಕುಟಾಲಾರ್) ಮೂಲ್ಯ ಇದರಲ್ಲಿ ಕುಂಬಾರರ ಅನೇಕ ಪ್ರಭೇದಗಳು ಬಿಟ್ಟು ಹೋಗಿವೆ. ಇದರಿಂದಾಗಿ ಮೀಸಲಾತಿಯ ಪಡೆಯಲು ಕುಂಬಾರರಿಗಾದ ತೊಂದರೆ ಹೇಳತೀರದು ಕೇಳತೀರದು. ಕೇರಳ ಸರ್ಕಾರವು ಕುಂಬಾರರ ಪಂಗಡಗಳನ್ನು ಹಿಂದುಳಿದ ವರ್ಗಕ್ಕೆ ಸೇರಿಸಿದರೂ ಕಾಸರಗೋಡು ಜಿಲ್ಲೆಯಲ್ಲಿ ಹೆಚ್ಚಾಗಿ ವಾಸಿಸುತ್ತಿರುವ ಮೂಲ್ಯ ಎಂಬ ಹೆಸರಿನ ತುಳು ಕುಂಬಾರರ ಹೆಸರು ಬಿಟ್ಟು ಹೋಗಿದೆ ಹೀಗಾಗಿ ಅವರು ಮೀಸಲಾತಿಯ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಸಣ್ಣ ತಪ್ಪಿನಿಂದಾಗಿ ಇಡೀ ಜನಾಂಗವೇ ಅನುಭವಿಸಬೇಕಾದ ಸಂಗತಿ ಬಂದಿದೆ ಎನ್ನಬಹುದು. ಹಿಂದುಳಿದ ವರ್ಗಗಳ ಬದುಕಿಗೆ ಜೀವ ತುಂಬುವ ಹಾವನೂರು ಆಯೋಗ ಕೂಡ ಕೆಲವೊಂದು ಪ್ರಮಾದಗಳನ್ನುಂಟು ಮಾಡಿತು.

ಹಾವನೂರುವರದಿಯಲ್ಲಿ ಲಿಂಗಾಯತ ಕುಂಬಾರರನ್ನು ಹಿಂದುಳಿದ ಪಂಗಡದಿಂದ ಬಿಟ್ಟಿದ್ದು ಅವರೇ ತಮ್ಮ ವರದಿಯಲ್ಲಿ ಕುಂಬಾರಿಕೆ ವೃತ್ತಿಯಿಂದ ಆರ್ಥಿಕ ಸ್ಥಿತಿಗತಿ ಸುಧಾರಿಸಲು ಸಾಧ್ಯವಿಲ್ಲ ಅದ್ದರಿಂದ ಕುಂಬಾರರನ್ನು ಹಿಂದುಳಿದ ಪಂಗಡಕ್ಕೆ ಸೇರಿಸಲಾಗಿದೆ. ಲಿಂಗಾಯತ ಕುಂಬಾರರನ್ನ ಇತರೆ ಹಿಂದುಳಿದ ವರ್ಗಗಳ ಮೇಲ್ಪದರಿನಲ್ಲಿ ಇಟ್ಟಿದ್ದಾರೆ. ಕೇಂದ್ರ ಸರ್ಕಾರ ಲಿಂಗಾಯತ ಕುಂಬಾರರನ್ನು ಇತರೆ ಹಿಂದುಳಿದ ವರ್ಗದ ಪಟ್ಟಿಗೆ ಸೇರಿಸಬೇಕೆಂದು ಆದೇಶ ಹೊರಡಿಸಿದೆ. ಈ ದೆಸೆಯಲ್ಲಿ ಕುಂಬಾರರ ಸಂಘ ನಡೆಸಿದ ಪ್ರಯತ್ನವು ಶ್ಲಾಘನೀಯವಾಗಿದೆ.

**ಕುಂಬಾರಿಕೆಯು ಬದಲಾವಣೆಯ ಆಧುನಿಕ ಸ್ವರೂಪ**

ನಮ್ಮ ದೇಶದ ಎಲ್ಲಾ ಕಲೆಗಳು ಆಧುನಿಕತೆಯ ಹೊಸ ರೂಪವನ್ನು ಪಡೆದು ಕೊಳ್ಳುತ್ತಿವೆ. ಆದರೆ ಕುಂಬಾರಿಕೆ ಕಲೆಯು ಮಾತ್ರ ಮಂದಗತಿಯಲ್ಲಿ ಆಧುನಿಕತೆ ಎಡೆಗೆನಡೆದು ಕೊಂಡು ಹೋಗುತ್ತಿದೆ ಎಂದು ಹೇಳಬಹುದಾಗಿದೆ. ಈಗಲೂ ಗ್ರಾಮೀಣ ಪ್ರದೇಶದ ಕುಂಬಾರರು ಹಲವು ನೂರು ವರ್ಷಗಳ

ಹಿಂದಿನ ಭಾರವಾದ ತಿಗುರಿಯನ್ನು ಮಡಕೆಮಾಡಲು ಬಹಳಷ್ಟು ಕೆಳದರ್ಜೆಯ ಆವಿಗೆಯನ್ನು ಮಡಕೆ ಸುಡಲು ಬಳಸುತ್ತಿದ್ದರೆ. ಆಧುನಿಕತೆಯಲ್ಲಿ ಬಂದಂಥ ಬಾಲ್ ಬೇರಿಂಗ್ ತಿಗುರಿಗಳ ಬಳಕೆ ತೀರ ಕಡಿಮೆ ಸುಸಜ್ಜಿತವಾದ ಆವಿಗೆಗಳ ಬಳಕೆ ಇಲ್ಲವೆ ಇಲ್ಲ ಕುಂಬಾರಿಕೆ ಕಲೆಯಲ್ಲಿ ಆಧುನೀಕತೆ ಕಾಲಿಟ್ಟು ೩೦೦-೪೦೦ ವರ್ಷಕಳೆದರೂ ಅವು ಬಡ ಕುಂಬಾರರನ್ನು ತಲುಪಿಲ್ಲವಾಗಿದೆ.

ಆಧುನೀಕರಣದಿಂದ ಮತ್ತು ತಂತ್ರಜ್ಞಾನದ ಹೊಸ ಆವಿಷ್ಕಾರದ ಪ್ರಭಾವದಿಂದ ಮಡಿಕೆ ಮಾಡಲು ವಿದ್ಯುತ್ ಚಕ್ರ ಬಳಕೆಗೆ ಬಂದುದರಿಂದ ಕುಂಬಾರಿಕೆ ಕಲೆ ಶ್ರಮರಹಿತವು ಸಮಯದ ಉಳಿತಾಯವಾಗಿ ಆಧುನಿಕವಾಗಿ ಮುನ್ನೆಡೆಯಲು ಸಾಧ್ಯವಾಯಿತು. ಕುಂಭಕಲೆ ಆಧುನಿಕತೆಗೊಳ್ಳಲು ವಿದ್ಯುತ್‌ನ ಪಾತ್ರ ಬಹಳ ಮುಖ್ಯವಾದದ್ದು. ಸುಧಾರಿತ ಭಟ್ಟಿಗಳು ಬಳಕೆಗೆ ಬಂದವು. ಗಡಿಗೆಗಳನ್ನು ಸುಡಲು ತೈಲ; ಅನಿಲ, ವಿದ್ಯುತ್‌ಅನ್ನು ಉಪಯೋಗಿಸುವುದು ಆರಂಭವಾಯಿತು. ಹತ್ತು ವರ್ಷಗಳಿಂದೀಚೆಗೆ ಪಾಶ್ಚಿಮಾತ್ಯ ರಾಷ್ಟ್ರಗಳು ಫೈಬರ್ ಕವಚದ ಆವಿಗೆಯನ್ನು ಗಡಿಗೆಗಳನ್ನು ಸುಡಲು ಉಪಯೋಗಿಸಲಾರಂಭಿಸಿವೆ. ಇದರಿಂದಾಗಿ ಗಡಿಗೆಗಳ ಸುಡುವಿಕೆಯ ಕ್ರಮದಲ್ಲಿ ಸಾಕಷ್ಟು ಬದಲಾಣೆಗಳು ಆಗಿವೆ. ಕೇವಲ ಒಂದೆರಡು ಗಂಟೆಗಳಲ್ಲಿ ಮಡಿಕೆಗಳನ್ನು ಸುಡಬಹುದಾಗಿದೆ. ಯಂತ್ರ ನಾಗರೀಕತೆ ಮನುಕುಲಕ್ಕೆ ಶಾಪವಾಗಿ ಇನ್ನೊಂದು ಕಡೆ ವರವಾಗಿರುವುದು ಕಾಲದ ವಿಪರ್ಯಾಸವೇ ಸರಿ. ಯಂತ್ರ ನಾಗರಿಕತೆಯಿಂದಾಗಿ ನಗರೀಕರಣ ತೀವ್ರಗೊಂಡು ವಸತಿಗಳ ನಿರ್ಮಾಣ ಹೆಚ್ಚಾಯಿತು ಮಳೆ ಮತ್ತು ಮಂಜಿನ ಪ್ರದೇಶಗಳ ವಸತಿಗಳ ಹಂಚಿನ ಮಾಳಿಗೆ ಸೂಕ್ತವೆಂದು ಕಂಡು ಬಂದುದರಿಂದ ವಿಶ್ವದಾದ್ಯಂತ ಹಂಚಿನ ಕಾರ್ಖಾನೆಗಳು ತಲೆ ಎತ್ತಿದವು ಕುಂಭಕಲೆಯಲ್ಲಿ ಇದೊಂದು ಹೊಸ ತಿರುವು ಹಂಚನ್ನು ತಯಾರಿಸುವುದು ಸುಲಭವು ಸರಳವೂ ಮತ್ತು ಕಡಿಮೆ ಬೆಲೆಯದ್ದು ಆಗಿದ್ದರಿಂದ ಹಂಚಿನ ಬೇಡಿಕೆ ಹೆಚ್ಚಾಗ ತೊಡಗಿತು. ಭಾರತದಲ್ಲಿ ಪೋರ್ಚುಗೀಸರ ಕಾಲದಲ್ಲಿ ಮಂಗಳೂರಿನಲ್ಲಿ ಹಂಚಿನ ಕಾರ್ಖಾನೆ ಆರಂಭವಾಯಿತು. ಮಂಗಳೂರು

ದೇಶ ವಿದೇಶಗಳಲ್ಲಿ ಹೆಸರಾಯಿತು. ಇಂದಿಗೂ ಮಂಗಳೂರು ಹಂಚಿನ ಕಾರ್ಖಾನೆಗಳಲ್ಲಿ ಸಾವಿರಾರು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ. ಗುಜರಾತಿನ ಕಾಥೇವಾಡ ಪ್ರದೇಶ ಕೂಡ ಮಂಗಳೂರು ಹಂಚಿನ ತಯಾರಿಕೆಯಲ್ಲಿ ಪ್ರಸಿದ್ಧವಾಗಿದೆ. ಕೋಲಾರ ಜಿಲ್ಲೆಯ ಮಾಲೂರು ಕೂಡ ಮಾಳಿಗೆ ಹಂಚುಗಳಿಗೆ ಪ್ರಸಿದ್ಧವಾಗಿದೆ. ಅನೇಕ ಮಂಗಳೂರು ಹಂಚಿನ ಕಾರ್ಖಾನೆಗಳು ಇಲ್ಲಿ ತಲೆ ಎತ್ತಿವೆ. ಹಂಚಿನಲ್ಲಿ ನಾನಾ ನಮೂನೆಗಳು ಬಳಕೆಗೆ ಬಂದವು ಮನೆಗಳ ನೆಲಕ್ಕೆ ಕೂಡ ಹಂಚುಗಳನ್ನು ಬಳಸತೊಡಗಿದರು. ಈಗೀಗ ಬಗೆ ಬಗೆಯಲ್ಲಿಯೆ ಉತ್ಕೃಷ್ಟವಾದ ಅಂದ ಚೆಂದದ ವಿನ್ಯಾಸ ಬಣ್ಣಗಳಿಂದ ಕೂಡಿದ ಹಂಚಿನ ತಯಾರಿಕೆ ನಡೆದಿದೆ ಮನೆಯ ಮಾಳಿಗೆ ನೆಲ ಗೋಡೆ ಎಲ್ಲವನ್ನು ಹಂಚು ಆಕ್ರಮಿಸತೊಡಗಿದೆ.

ನಮ್ಮ ಭಾರತ ದೇಶದಲ್ಲಿ ಕುಂಬಾರಿಕೆಯನ್ನು ಇಂದಿಗೂ ಜೀವಂತವಾಗಿ ಕಾಯ್ದು ಕೊಂಡು ಬಂದ ಕೇಂದ್ರಗಳೆಂದರೆ ಅಜಮಘರ್, ಲಕನೌ, ದೆಹಲಿ, ಜಲಂಧರ್, ಬಿಕನೇರಿ, ಗ್ವಾಲಿಯರ್, ಬರಹಾನಪುರ, ಕಾಶ್ಮೀರ, ಬಂಗಾಳ, ಮುಲ್ತಾನ, ಮದ್ರಾಸ್, ಮಧುರೆ, ಸೇಲಂ, ಕುಂಭಕೋಣಂ, ಕರ್ನಾಟಕದ ಖಾನಾಪುರು ಹಾಗೂ ಬೆಂಗಳೂರು ಆಲ್ವಾರದಲ್ಲಿ ಕಾಗದಂತಹ ತಳ್ಳನೆಯ ಜೇಡಿಮಣ್ಣಿನ ಪದರಿನಿಂದ ಮಾಡುವ ಮಡಕೆಗಳು ಪ್ರಸಿದ್ಧವಾಗಿವೆ. "ಅದಕ್ಕೆ ಕಾಗಜೀ ಸುರಾಯಿ" ಎಂದು ಹೆಸರು ಇದನ್ನು ಬೇಸಿಗೆಯಲ್ಲಿ ತಣ್ಣನೆಯ ನೀರನ್ನು ಕುಡಿಯಲು ಉಪಯೋಗಿಸುವರು ಹೊಳಪಿನ ಮಡಿಕೆ ಕುಡಿಕೆಗಳನ್ನ ಮಾಡುವಲ್ಲಿ ಭಾರತ ಮತ್ತು ಪಾಕಿಸ್ತಾನ ಹೆಸರು ಪಡೆದಿವೆ. ಈಶಾನ್ಯ ಭಾರತದ ಬುಡಕಟ್ಟು ಜನಾಂಗದ ಕುಂಬಾರರು ಮಡಿಕೆ ಮಾಡುವುದರಲ್ಲಿ ಕುಂಬಾರ ಗಿತ್ತಿಯರದೇ (ಮಹಿಳೆಯರ ಪಾತ್ರ) ಇವರು ಕೈಯಿಂದ ಮಾಡುವರು ಈ ಕುಂಬಾರಿಕೆ ಕಲೆಯಲ್ಲಿ ಪುರುಷನಿಗೆ ಸಹಾಯಕಳಾಗಿ ಮಾರ್ಗದರ್ಶಕಳಾಗಿ ಮಹಿಳೆಯು ಪ್ರಮುಖ ಪಾತ್ರವಹಿಸುತ್ತಾಳೆಂದು ಹೇಳಬಹುದಾಗಿದೆ.

ಭಾರತದಲ್ಲಿ ಕುಂಭಕಲೆಯ ನವೀನಯುಗ ಪ್ರಾರಂಭವಾದದ್ದು ನೂರು ವರ್ಷಗಳಿಂದ ಇತ್ತೀಚೇಗೆ ಎಂದು ಹೇಳಬಹುದು. ಪಾಶ್ಚಿಮಾತ್ಯ ರಾಷ್ಟ್ರಗಳ ಪ್ರಭಾವದಿಂದ ಭಾರತದ ನಗರಗಳಲ್ಲೂ ಸ್ಟುಡಿಯೋ ಪಾಟರಿ ಪ್ರಾರಂಭವಾಯಿತು ಗ್ಲೇಜ್ಡ್ ಪಾಟರಿಯ ಬಗೆಗೆ ಇಲ್ಲಿಯ ಕಲಾವಿದರು ಆಸಕ್ತಿವಹಿಸಿದರು ಇದರಿಂದಾಗಿ ದೆಹಲಿ, ಕಲ್ಕತ್ತಾ, ಮುಂಬೈ ನಗರಗಳಲ್ಲಿ ಸ್ಟುಡಿಯೋ ಪಾಟರಿಯ ಕಾರ್ಯಾಗಾರಗಳು ತಲೆ ಎತ್ತಿದವು ೧೯೭೦ ರಲ್ಲಿ ಸರದಾರ ಗುರುಚರಣ್‌ಸಿಂಗ್ ದೆಹಲಿಯಲ್ಲಿ ನೀಲ ವರ್ಣದ ಮಡಕೆಯ ಕಾರ್ಯಾಗಾರವನ್ನು ಆರಂಭಿಸಿ ಮೊಗಲ್ ಮತ್ತು ಪರ್ಶಿಯನ್ ಶೈಲಿಯನ್ನು ಬಿಟ್ಟು ಹೊಸ ಶೈಲಿಯ ಕುಂಭಕಲೆಯನ್ನು ರೂಡಿಸಿದನು ಗುರು ಚರಣ್‌ಸಿಂಗ್‌ನನ್ನು ಭಾರತದ ಸ್ಟುಡಿಯೋ ಪಾಟರಿಯ ಜನಕನೆಂದು ಕರೆಯುತ್ತಾರೆ. ಆತನು ಭಾರತೀಯ ಕುಂಭಕಲೆಯ ಶ್ರೇಷ್ಠನೂ ಹೌದು ೧೯೬೦ ರ ನಂತರ ನಿರ್ಮಲ ಪಟವರ್ಧನ, ಈರಾಚೌಧರಿ, ದೆಹಲಿಯ ಬ್ಲೂಪಾಟರಿಯ ಬೆಳವಣಿಗೆಗೆ ಕಾರಣರಾದರು. ಈ ದೇಶದಲ್ಲಿ ನೆಲೆಸಿದ ಪರದೇಶದ ಕುಂಭ ಶಿಲ್ಪಿಗಳಾದ ರೇಮಿಕರ್, ಧೇಭೋರ್‌ಸ್ಮಿತ್‌ರವರು, ಸ್ಟೋನ್ ವ್ಹೇರ್ ಪಾಟರಿಯಲ್ಲಿ ಹೊಸತನವನ್ನು ತಂದರು ದೇಭೋರ್‌ಸ್ಮಿತ್ ಪಂಡಿಚೇರಿಯಲ್ಲಿ ಗೋಲ್ಡನ್ ಬ್ರೀಜ್ಡ್ ಪಾಟರಿ ಸಂಸ್ಥೆಯನ್ನು ಸ್ಥಾಪಿಸಿದರು. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯ ಬರೋಡ ವಿಶ್ವವಿದ್ಯಾನಿಲಯ ಸ್ಟುಡಿಯೋ ಪಾಟರಿ ಜನಪ್ರಿಯ ಗೊಳ್ಳಲು ಶ್ರಮಿಸುತ್ತಿವೆ. ಭಾರತಿಯ ಕಲಾವಿದರು ಮಡಿಕೆಗಳ ಅದ್ಭುತ ಪ್ರಪಂಚವನ್ನು ಗ್ಯಾಲರಿಗೆ ತೆರೆದಿಟ್ಟರು".

ಭಾರತದ ದಕ್ಷಿಣ ಭಾಗದಲ್ಲಿ ಕುಂಬಾರಿಕೆಗೆ ಪ್ರಾತಿನಿಧ್ಯತೆ ನೀಡಿ ಕುಂಬಾರರ ಬದುಕಿಗೆ ನೆರವಾದ ರಾಜ್ಯವೆಂದರೆ ತಮಿಳು ನಾಡು ಈ ಹಿಂದಿನ ಐದಾರು ದಶಕಗಳ ಹಿಂದೆ ಮದ್ರಾಸ್ ಪ್ರಾಂತದಲ್ಲಿ ಅಲ್ಲಲ್ಲಿ ಅನೇಕ ಕುಂಬಾರ ಶಾಲೆಗಳನ್ನು ತೆರೆದು ಕುಂಬಾರಿಕೆ ಕಲೆಯುವವರಿಗೆ ಶಿಷ್ಯವೇತನ ಕೊಟ್ಟು ಆಧುನಿಕ ಕುಂಭಕಲೆಯಲ್ಲಿ ತರಬೇತಿ ನೀಡಲಾಗುತ್ತಿತ್ತು. ಅಂತಹ ಒಂದು ಶಾಲೆ ಆಗಿನ ಬಳ್ಳಾರಿ ಜಿಲ್ಲೆಯ ಭಾಗವಾಗಿ ಮದ್ರಾಸ್ ಪ್ರಾಂತ್ಯದಲ್ಲಿದ್ದ ಹರಪನ ಹಳ್ಳಿಯಲ್ಲಿ ಸ್ಥಾಪನೆ ಯಾಗಿತ್ತು. ಆ ಶಾಲೆಯು ಹೊಸಪೇಟೆ ರಸ್ತೆಗೆ ಹತ್ತಿರದಲ್ಲಿರುವ ಗೋಶಾವಿ ಗುಡ್ಡದ ಕೆಳಗಿತ್ತು. ಅದರೆ ಈಗ ಹರಪನಹಳ್ಳಿಯ ಗೋಶಾವಿ ಗುಡ್ಡದ ಬಳಿ ಕುಂಬಾರ ಶಾಲೆ ಇತ್ತೆಂಬುದಕ್ಕೆ ಈಗ ಕುರುಹುಗಳು ಕೂಡ ಉಳಿದಿಲ್ಲವಾಗಿವೆ.

ಈಗ ಆಧುನಿಕ ಯುಗದಲ್ಲಿಯೂ ಕೂಡ ಕುಂಭ ಕಲೆಯು ಹವ್ಯಾಸವಾಗಿ ಬೆಳೆಯ ತೊಡಗಿರುವುದು ಮತ್ತೊಂದು ಆಶಾದಾಯಕ ಸೂಚನೆ ಕುಂಬಾರರಲ್ಲದವರು ಕುಂಭ ಕಲೆಯನ್ನು ಕಲಿಯ ತೊಡಗಿದ್ದಾರೆ. ಖಾನಾಪುರದ ಕುಂಬಾರಿಕೆ ತರಬೇತಿ ಕೇಂದ್ರದಲ್ಲಿ ಬ್ರಾಹ್ಮಣ ಯುವಕರು ಕುಂಬಾರಿಕೆಯನ್ನು ಕಲಿಯತೊಡಗಿದ್ದಾರೆ. ಕನ್ನಡದ ಶತಾಯುಶಿ ಸಾಹಿತಿ ಎ.ಎನ್ ಮೂರ್ತಿರಾಯರ ಮೊಮ್ಮಗಳು ಸಂಧ್ಯಾ ಕುಂಭಕಲೆಯಲ್ಲಿ ಪರಿಣಿತಿ ಪಡೆದು ಈಗಾಗಲೇ ಅನೇಕ ಕಡೆ ಟೆರ್ರಕಾಟ ಕಲೆಯ ಪ್ರದರ್ಶನ ನಡೆಸಿದ್ದಾಳೆ. ಬೆಂಗಳೂರಿನ ಜಾನ್ ದೇವರಾಜ್ ಕುಂಭ ಕಲೆಯಲ್ಲಿ ಅಪ್ರತಿಮ ಕಲಾವಿದ ಇವರು ಮಾಡಿದ ಮಣ್ಣಿನ ಮೂರ್ತಿಗಳು ರಾಷ್ಟ್ರೀಯ ಮೆಚ್ಚಿಗೆ ಪಡೆದಿವೆ ಹಾಗೆಯೇ ಕುಂಭಕಲೆಯಲ್ಲಿ ಪ್ರಮುಖ್ಯತೆಯನ್ನು ಪಡೆದ ಇನ್ನೊಬ್ಬ ಕಲಾವಿದ ನೆಂದರೆ ಕೆ.ಜಿ. ಸುಬ್ರಹ್ಮಣ್ಯಮ್ ರವರು ಪಶ್ಚಿಮ ರಾಷ್ಟ್ರಗಳಲ್ಲಿ ಕುಂಭಕಲೆ ವೇಗವಾಗಿ ಆಧುನಿಕತೆಯತ್ತ ಸಾಗಿದೆ. ಇಗ್ಲೆಂಡ್, ಡೀನ್‌ಮಾರ್ಕ್, ಸ್ವೀಡನ್, ನಾರ್ವೆಗಳು ಮಣ್ಣಿನ ವಸ್ತುಗಳ ತಯಾರಿಕೆಗಳಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿದ ಏಷ್ಯದ ಚೈನಾ, ಜಪಾನ್ ಕೂಡ ಕುಂಭಕಲೆಯಲ್ಲಿ ಅತೀ ಹೆಚ್ಚಿನ ಪ್ರಗತಿಯನ್ನು ಸಾಧಿಸಿವೆ ಊಟದ ಟೇಬಲ್ ಸಾಮಾನುಗಳಿಂದ ಮೊದಲ್ಗೊಂಡು ಷೋಕೆಸಿನವರೆಗೂ ಮಣ್ಣಿನ ವಸ್ತುಗಳು ಅಲಂಕರಿಸಿವೆ. ಕುಂಭಕಲೆಯು ಮರು ಹುಟ್ಟುಪಡೆದು ವ್ಯಾಪಕವಾಗಿ ಹಬ್ಬುತ್ತಿರುವುದೆ ಸಂತಸದ ಸಂಗತಿಯಾಗಿದೆ ಎಂದು ಹೇಳಬಹುದಾಗಿದೆ."

**೨.೪ ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು: ಸ್ತ್ರೀವಾದಿ ನಿರ್ವಚನ**

ಸಾಂಪ್ರದಾಯಿಕ ಮಹಿಳೆಯರು ಮತ್ತು ಪುರುಷರು ಮನೆಯಲ್ಲಿದ್ದುಕೊಂಡು ತಮ್ಮ ಜೀವನ ನಿರ್ವಹಣೆಗಾಗಿ ಅತೀ ಕಡಿಮೆ ಬಂಡವಾಳ ಹೂಡಿ ದುಡಿಮೆಯನ್ನು ಪ್ರಾರಂಭಿಸಿಕೊಂಡಿದ್ದೇ ಇಂದು

ಗುಡಿಕೈಗಾರಿಕೆಗಳಾಗಿ ಮಾರ್ಪಟ್ಟಿವೆ. ಈ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರು ಮೇಲ್ನೋಟಕ್ಕೆ ಹೆಚ್ಚಾಗಿ ದುಡಿಯುತ್ತಿದ್ದಾರೆ. ಆದರೆ ಇದರ ಲಾಭ ಮಾತ್ರ ಪುರುಷರ ಕೈ ಸೇರುತ್ತಿದೆ. ಮಹಿಳೆಯರು ದುರ್ಬಲ ವರ್ಗದವರಾಗಿರುವುದರಿಂದ ಪುರುಷ ವರ್ಗವು ಇವರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ತುಳಿಯುತ್ತಿರುವುದು ಕಂಡುಬರುತ್ತಿದೆ.

ಮಹಿಳೆಯರು ಮನೆಯಲ್ಲಿಯೇ ಇದ್ದು, ವಸ್ತುಗಳ ತಯಾರಿಕೆ ಮಾಡುವವರಾಗಿದ್ದು, ಪುರುಷರು ಆ ವಸ್ತುಗಳನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋಗಿ ವಸ್ತುಗಳ ಮಾರಾಟ ಮಾಡಿ ಬಂದ ಹಣವನ್ನು ತಾವೇ ಉಪಯೋಗಿಸಿಕೊಳ್ಳುತ್ತಿದ್ದಾರೆ. ಇಲ್ಲಿ ಮಹಿಳೆಗೆ ಯಾವ ಆರ್ಥಿಕ ಬೆಂಬಲವಾಗಿ ಅಥವಾ ಆರ್ಥಿಕ ಸ್ಥಿತಿ ಉತ್ತಮಗೊಳಿಸುವ ಆಶಯವಾಗಲಿ ಎಲ್ಲೂ ಕಂಡುಬರುವುದಿಲ್ಲ ಎನ್ನಬಹುದು. ಹೀಗಾಗಿ ಮಹಿಳೆ ಆರ್ಥಿಕ ಸ್ಥಿತಿಯಿಂದ ದುರ್ಬಲಳಾಗಿದ್ದು, ಚಿಕ್ಕ ಪುಟ್ಟ ಸಂಗತಿಗಳಿಗೂ ಪುರುಷರ ಕಡೆಗೆ ಕೈ ಒಡ್ಡುವಂತಾಗಿದೆ. ಇಲ್ಲಿ ಕಂಡುಬರುವ ಸಂಗತಿ ಎಂದರೆ; ಮಹಿಳೆಯು ವಸ್ತುಗಳ ಉತ್ಪಾದಕಳಾಗಿ ಬಿಂಬಿತವಾಗಿದ್ದು, ಪುರುಷ ಲಾಭದಾಯಕನಾಗಿದ್ದಾನೆ.

ಮಹಿಳೆಯು ವಸ್ತುಗಳ ಉತ್ಪಾದಕಳಾಗಿ ಮನೆಯಲ್ಲಿಯೇ ಬಂದಿತಳಾಗಿದ್ದು, ಸಮಾಜದಿಂದ ದೂರವಾಗಿದ್ದಾಳೆ. ಆಕೆ ಉತ್ಪಾದಿಸಿದ ವಸ್ತುಗಳ ಮಾರಾಟಕ್ಕೆ ಮಾರುಕಟ್ಟೆಯನ್ನು ದೂರವಾಗಿಸಿದ್ದಾರೆ. ಹೀಗಾಗಿ ಸಾಮಾಜಿಕವಾಗಿ ವ್ಯವಹಾರ ಜ್ಞಾನ ಮಹಿಳೆಗೆ ಇಲ್ಲವೆಂದು ಅಲ್ಲಗಳೆಯುತ್ತಾ ಸಮಾಜದಿಂದ ದೂರವಿರಿಸಿದ್ದಾರೆ. ಇದು ಪುರುಷ ವರ್ಗದವರ ಹುನ್ನಾರ ಎಂದು ಹೇಳಬಹುದು.

ಧಾರ್ಮಿಕವಾಗಿ ನೋಡಿದಾಗ ಮಹಿಳೆಯನ್ನು ಮೂಲೆಗುಂಪು ಮಾಡಲಾಗುತ್ತಿದೆ. ಕೆಲವು ವೃತ್ತಿಗಳು ಆಯಾ ಧರ್ಮಗಳಿಗನುಗುಣವಾಗಿ ಅದರಲ್ಲಿ ಮುಖ್ಯವಾಗಿ ಆಯಾ ಜಾತಿಗಳಿಗೆ ತಕ್ಕಂತೆ ಒಂದೊಂದು ವೃತ್ತಿ ಧರ್ಮ ಆಯಾ ಸಮುದಾಯದವರು ಅನುಸರಿಸುತ್ತಿದ್ದಾರೆ. ಇಲ್ಲಿ ಮಹಿಳೆಯನ್ನು ಧಾರ್ಮಿಕವಾಗಿ ಕಟ್ಟಿ ಹಾಕುತ್ತಿದ್ದು, ಆಕೆಗೆ ವ್ಯವಹಾರ ಜ್ಞಾನ, ಓದು, ಬರಹಗಳಿಂದ ದೂರವಿರಿಸಲಾಗುತ್ತಿದೆ. ಹೀಗಾಗಿ ಮಹಿಳೆ ಅಭಿವೃದ್ಧಿ ಹೊಂದು ಇಚ್ಛೆ ಇದ್ದರೂ ಸಹ ಪುರುಷ ವರ್ಗ ಅದಕ್ಕೆ ತಡೆಗೋಡೆಯಂತೆ ನಿಂತಿದೆ. ಇಲ್ಲಿ ಪುರುಷರು ತಮ್ಮ ಹಿತಾಸಕ್ತಿಗಳಿಗನುಗುಣವಾಗಿ ಮಹಿಳೆಯರ ಮೇಲೆ ಧಾರ್ಮಿಕ ಕಟ್ಟುಪಾಡುಗಳನ್ನು ಹೇರಲಾಗುತ್ತಿದೆ. ಪುರುಷರು ಮಹಿಳೆಯರನ್ನು ವ್ಯವಹಾರಗಳಿಗೆ ಒಳಪಡಿಸಿಕೊಳ್ಳಲು ಇಷ್ಟಪಡುವುದಿಲ್ಲ. ಆಕೆ ಏನಿದ್ದರೂ ಮನೆಯಲ್ಲಿಯೇ ಯಂತ್ರದ ಹಾಗೆ ವಸ್ತುಗಳ ತಯಾರಿಕೆಗೆ ಮಾತ್ರ ಮೀಸಲು ಆಕೆಯ ಕೌಶಲ್ಯವನ್ನು ಪುರುಷ ವರ್ಗ ದುರುಪಯೋಗ ಪಡಿಸಿಕೊಳ್ಳುತ್ತಿದೆ. ಆಕೆಯಿಂದ

ಸಹಾಯ ಪಡೆದುಕೊಂಡು ಆಕೆಯ ಜೀವನ ನಿರ್ವಹಣೆಯ ಜವಾಬ್ದಾರಿಯನ್ನು ಪುರುಷರು ಕೈಗೆತ್ತಿಕೊಳ್ಳುತ್ತಿಲ್ಲ. ಹೀಗಾಗಿ ಮಹಿಳೆ ಬೀದಿ ಪಾಲಾಗುತ್ತಿದ್ದಾಳೆ. ಆಕೆ ಇಂದು ಮೂರು ಹೊತ್ತಿನ ಊಟಕ್ಕೂ ನಿರ್ಗತಿಕಳಾಗಿ ನಿಸ್ಸಹಾಯಕಳಾಗಿ ಪುರುಷರ ಕಡೆಗೆ ನೋಡುವಂತಾಗಿದ್ದಾಳೆ(ಕೈಚಾಚುವಂತಾಗಿದ್ದಾಳೆ)

ತಂತ್ರಜ್ಞಾನದಿಂದಲೂ ಮಹಿಳೆಯರ ಕೌಶಲ್ಯ ಅವನತಿಯತ್ತ ಸಾಗಿದೆ ಎನ್ನಬಹುದು. ಇಲ್ಲಿ ಮಹಿಳೆಯರು ತಮ್ಮ ಕೈಗಳಿಂದ ಮಾಡುವ ಕೆಲಸವನ್ನು ಕಡಿಮೆ ಸಮಯದಲ್ಲಿ ಹೆಚ್ಚಿನ ಕೆಲಸವನ್ನು ತಂತ್ರಜ್ಞಾನದಿಂದ ಬಂದಂತಹ ಮೆಷಿನ್‌ಗಳು ಮಾಡುತ್ತಿದ್ದು, ಮಹಿಳೆಯರ ಕೈಕೆಲಸಗಳಿಗೆ ಬೆಲೆ ಇಲ್ಲದಂತಾಗಿದೆ. ಮಹಿಳೆಯರಿಗೆ ಕೊಡುವಂತಹ ಕೂಲಿಯ ಉಳಿತಾಯ, ಸಮಯದ ಉಳಿತಾಯ ಈ ಯಂತ್ರಗಳು ಮಾಡುತ್ತಿವೆ. ಹೀಗಾಗಿ ಮಹಿಳೆಯರು ಕೆಲಸಗಳನ್ನು ಕಳೆದುಕೊಳ್ಳುವಂತಾಗಿದೆ. ಅವರ ಜೀವನ ನಿರ್ವಹಣೆ ತುಂಬಾ ಕಷ್ಟಕರವೆನಿಸಿದೆ. ತಂತ್ರಜ್ಞಾನ ಮತ್ತು ವೈಜ್ಞಾನಿಕತೆಯಿಂದಾಗಿ ಸಣ್ಣಪುಟ್ಟ ಗುಡಿಕೈಗಾರಿಕೆಗಳು ಅವನತಿಯತ್ತ ಸಾಗಿವೆ. ಈ ಆಧುನಿಕತೆಯ ಕಾಲದಲ್ಲಿ ಪ್ಲಾಷ್ಟಿಕ್‌ನ ಬಳಕೆ ಹೆಚ್ಚಾಗಿದ್ದು, ಕುಂಬಾರಿಕೆಯಲ್ಲಿ ಬಳಸುತ್ತಿದ್ದ ಮಣ್ಣಿನ ವಸ್ತುಗಳು, ಚಮ್ಮಾರಿಕೆಯಲ್ಲಿ ಬಳಸುತ್ತಿದ್ದ ಚರ್ಮದ ವಸ್ತುಗಳು ಹಾಗೂ ಕೌದಿ ಎಣಿಕೆಯಲ್ಲಿನ ಕೌಶಲ್ಯಗಳು ಮೂಲೆ ಗುಂಪಾಗಿವೆ. ಹಾಗೂ ನಶಿಸುವ ಹಂತದಲ್ಲೂ ಇವೆ ಎಂದು ಹೇಳಬಹುದು. ಹೀಗಾಗಿ ಮಹಿಳೆಯರ ಕೈ ಕೌಶಲ್ಯಗಳಿಗೆ ಬೆಲೆ ಇಲ್ಲದಂತಾಗಿ ಮಹಿಳೆಯು ತಮ್ಮ ಜೀವನ ನಿರ್ವಹಣೆಯೇ ಕಷ್ಟವೆಂಬ ಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಇವರಿಗೆ ಆಧುನಿಕತೆಯ ಯಾವ ವಸ್ತುಗಳಾಗಲಿ, ಸಮಾಜವಾಗಲಿ ಪರಿಚಯವಿಲ್ಲದಿರುವುದರಿಂದ ಹಿಂದುಳಿಯಲಾರಾಂಭಿಸಿದ್ದಾರೆ. ಈ ತಂತ್ರಜ್ಞಾನ ವೈಜ್ಞಾನಿಕತೆಗಳಲ್ಲಿ ಪುರುಷರನ್ನೇ ಹೆಚ್ಚಾಗಿ ಕಾಣಬಹುದಾಗಿದೆ. ಇಲ್ಲಿ ಮಹಿಳೆ ಮೂಲೆ ಗುಂಪಾಗಿದ್ದಾಳೆ.

ನನ್ನ ಈ ಅಧ್ಯಯನದಲ್ಲಿ ಗುಡಿಕೈಗಾರಿಕೆಗಳಾದ ಚರ್ಮ ಕೈಗಾರಿಕೆ, ಕೌದಿ ಎಣಿಕೆ ಮತ್ತು ಕಸೂತಿ ಕಲೆ, ಕುಂಬಾರಿಕೆ ಈ ವರ್ಗದಲ್ಲಿ ಬರುವ ಮಹಿಳೆಯರ ಬದುಕನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ನಿರ್ವಚಿಸಲು ಇಚ್ಚಿಸಿದ್ದೇನೆ. ಈ ಮೇಲೆ ತಿಳಿಸಿದ ಗುಡಿ ಕೈಗಾರಿಕೆಗಳನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧. ಕುಂಬಾರ ಜನಾಂಗ; ಬಸವರಾಜ ಕುಂಚೂರು

೨. ಪಾದರಕ್ಷೆಗಳ ಕಲಾತ್ಮಕ ವಿನ್ಯಾಸ; ರೇವಣ್ಣ ಚಿಂತಾಮಣಿ (ಎಮ್.ಎ.ಎ. ಕಿರುಪ್ರಬಂಧ)

## ಅಧ್ಯಾಯ ಮೂರು

# ಗುಡಿಕೈಗಾರಿಕೆಗಳಲ್ಲಿ ಮಹಿಳೆಯರ ಸ್ಥಿತಿಗತಿಗಳು

## ಅಧ್ಯಾಯ : ಮೂರು

## ಗುಡಿಕೈಗಾರಿಕೆಗಳಲ್ಲಿ ಮಹಿಳೆಯ ಸ್ಥಿತಿಗತಿಗಳು

### ಪ್ರಸ್ತಾವನೆ

ಮನುಷ್ಯನ ದಿನನಿತ್ಯದ ಬದುಕಿನಲ್ಲಿ ನೋಡಿದಾಗ ಯಾವುದಾದರೂ ಒಂದು ವೃತ್ತಿಯಿಂದ ಜೀವಿಸುತ್ತಿರುತ್ತಾನೆ. ಮತ್ತು ಹೆಚ್ಚಾಗಿ ಗುಡಿಕೈಗಾರಿಕೆಗಳೇ ಹೆಚ್ಚಾಗಿ ಕಂಡುಬರುವುದರಿಂದ ಈ ಕೈಗಾರಿಕೆಗಳಲ್ಲಿ ಮಹಿಳೆಯರನ್ನು ಹೆಚ್ಚಾಗಿ ತೊಡಗಿಸಿಕೊಂಡಿರುತ್ತಾರೆ. ಗುಡಿಕೈಗಾರಿಕೆಗಳಿಂದ ಅಲ್ಲಿ ಕಚ್ಚಾ ವಸ್ತುಗಳಿಂದ ಹಿಡಿದು ಆ ವಸ್ತುಗಳ ತಯಾರಿಕೆಯ ಕೊನೆಯ ಹಂತದವರೆಗೂ ಮಹಿಳೆಯು ಪುರುಷನಿಗೆ ಸಹಾಯಕಳಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರ ಪಾಲು ಶೇ. ೭೫%ರಷ್ಟು ಇರುತ್ತದೆ.

ಈ ರೀತಿಯ ಗುಡಿಕೈಗಾರಿಕೆಗಳಲ್ಲಿ ಮಹಿಳೆಯು ಪುರುಷನಿಗಿಂತ ಹೆಚ್ಚಿನ ಕೆಲಸ ಮಾಡಿ ಕಡಿಮೆ ಕೂಲಿ ಪಡೆಯುವುದು / ಇಲ್ಲವೇ ಹೆಂಡತಿಯಾಗಿದ್ದರೆ ಪಡೆಯುವ ಕೂಲಿ ಇಲ್ಲದಂತಾಗುತ್ತದೆ. ಇಲ್ಲಿ ಮಹಿಳೆಯು ಕೈಗಾರಿಕೆಯಲ್ಲಿ ತೊಡಗುವಾಗ ಸ್ವತಂತ್ರಳಾಗಿ, ತೊಡಗಿಸಿದ ಬಂಡವಾಳಕ್ಕೆ ಲಾಭ ಬಂದ ನಂತರ ಅವಳು ಸ್ವತಂತ್ರಳಲ್ಲ. ಏಕೆಂದರೆ ಮಹಿಳೆಯು ಪುರುಷನ ಅಧೀನದಲ್ಲಿರುತ್ತಾಳೆ. ಗುಡಿಕೈಗಾರಿಕೆಗಳೆಲ್ಲ ಮಹಿಳೆಯರನ್ನೇ ಹೆಚ್ಚಿನ ಶ್ರಮದ ಕೆಲಸಕ್ಕೆ ತೊಡಗಿಸಿ ಕಡಿಮೆ ಕೂಲಿಯನ್ನು ನೀಡುವುದು ಗುಡಿಕೈಗಾರಿಕೆಗಳಲ್ಲಿ ಕಂಡುಬರುತ್ತದೆ. ಈ ಕಾರಣದಿಂದ ಇವರು ಅಸಂಘಟಿತ ವಲಯದಲ್ಲಿ ಹೆಚ್ಚಾಗಿ ಕಾಣಸಿಗುತ್ತಾರೆ. ಮತ್ತು ಇವರಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗಳಲ್ಲಿ ಯಾವುದೇ ರೀತಿಯ ಅವಕಾಶಗಳು ದೊರೆಯುವುದಿಲ್ಲವಾಗಿದೆ. ಇಲ್ಲಿ ಪುರುಷನು ಅವರ ಕೌಶಲ್ಯವನ್ನೇ ದುರ್ಬಳಕೆ ಮಾಡುತ್ತಿದ್ದಾನೆ.

## ೩.೧ ಆರ್ಥಿಕ ಸ್ಥಿತಿಗತಿಗಳು

ಗುಡಿ ಕೈಗಾರಿಕೆ ಮಾಡುವ ಮಹಿಳೆಯರಬದುಕು ವೃತ್ತಿಜೀವನ ಎಷ್ಟರಮಟ್ಟಿಗೆ ಕೌಶಲ್ಯದಿಂದ ಕೂಡಿಕೊಟ್ಟಿರುತ್ತದೆಯೋ ಅಷ್ಟೇ ಸಮ ಪ್ರಮಾಣದಲ್ಲಿ ಅವರ ಬದುಕು ಅತಂತ್ರ ಸ್ಥಿತಿಯಿಂದ ಕೂಡಿರುತ್ತದೆ. ಎಂದು ಹೇಳಬಹುದಾಗಿದೆ. ಮಹಿಳೆಯರು ಹೆಣೆದ ವಸ್ತುಗಳಿಗೆ ನಾವು ಕೌಶಲ್ಯದಿಂದ ಕೂಡಿದೆ ಎಂದು ಬರೀ ಬಾಯಿ ಮಾತಿನಿಂದ ಹೇಳುತ್ತೇವೆ ವಿನಃ ಆ ಕೌಶಲ್ಯಕ್ಕೆ ತಕ್ಕಂತೆ ಬೆಲೆಯನ್ನು ನಾವು ಕೋಡುವುದಿಲ್ಲ. ಏಕೆಂದರೆ ಸಾಮಾಜಿಕವಾಗಿ ಒಂದು ವೇಳೆ ಗುರುತಿಸಿದ ಆರ್ಥಿಕವಾಗಿ ಅವುಗಳಿಗೆ ಬೆಲೆಕಟ್ಟುಲು ಸಾಧ್ಯವಿಲ್ಲವಾಗಿದೆ. ಇಲ್ಲಿ ತಿಳಿದು ಬರುವ ವಿಷಯವೆಂದರೆ ಇರುವ ಅಸಂಘಟಿತ ಕ್ಷೇತ್ರದಿಂದ ಕೂಡಿದ ಮಹಿಳೆಯರೆ ಗುಡಿ ಕೈಗಾರಿಕೆಗಳಿಗೆ ಬಂದಿರುತ್ತಾರೆ ಎಂದು ತಿಳಿದು ಬರುತ್ತದೆ. ಅಸಂಘಟಿತ ಕ್ಷೇತ್ರವಾಗಿ ಗುಡಿಗಾರಿಕೆಗಳ ಮಹಿಳೆಯರು.

೧. ಅಸಂಘಟಿತ ಕ್ಷೇತ್ರದ ಕೆಲಸಗಳು ಸ್ಥಳೀಯವಾಗಿರುತ್ತವೆ ಇಲ್ಲಿ ಸ್ಥಳೀಯ ತಂತ್ರಜ್ಞಾನ, ಕಚ್ಚಾ ಸಾಮಗ್ರಿ ಹಾಗೂ ಮಾರುಕಟ್ಟೆಗೂ ಪ್ರಧಾನವಾಗಿರುತ್ತದೆ. ಸ್ಥಳೀಯ ಮಹಿಳೆಯರೇ ಹೆಚ್ಚಾಗಿ ದುಡಿಯುತ್ತಿರುತ್ತಾರೆ. ಅವರು ಸಾಂಪ್ರದಾಯಿಕ ವಿಚಾರ ಹಾಗು ಮನೋಭಾವಗಳಿಂದ ಬಂಧಿಸಲ್ಪಟ್ಟಿರುತ್ತಾರೆ.

೨. ಭಾರತದಲ್ಲಿ ಶೇ.೯೦ಕ್ಕಿಂತ ಹೆಚ್ಚಿನ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಖಾಸಗೀಕರಣ, ಜಾಗತೀಕರಣ ಸಾಗು ತಂತ್ತಜ್ಞಾನದ ಅಭಿವೃದ್ಧಿಯಿಂದಾಗಿ ದುಡಿಯುವ ಮಹಿಳೆಯರ ಸಂಖ್ಯೆ ಹೆಚ್ಚಾಗುತ್ತಿದ್ದರೂ ಸಹ ವಿದೇಶಿ ವಸ್ತುಗಳು ನಮ್ಮ ಮಾರುಕಟ್ಟೆಯನ್ನು ಅವರಿಸಿರುವುದರಿಂದ ಇಲ್ಲಿಯ ಮಹಿಳಾ ಉತ್ಪಾದಕರ ಪರಿಸ್ಥಿತಿ ಹದಗೆಟ್ಟಿದೆ ಎಂದು ಹೇಳಬಹುದು. ಹೀಗಾಗಿ ಮಹಿಳಾ ದುಡಿಮೆಗಾರರು ಬಹುರಾಷ್ಟ್ರೀಯ ಕಂಪನಿಗಳೊಂದಿಗೆ ಸ್ಪರ್ಧಿಸಲು ಸಾಧ್ಯವಾಗುತ್ತಿಲ್ಲ. ಶೇ.೫೦ರಷ್ಟು ಸಣ್ಣ ಕೈಗಾರಿಕೆಗಳು ಹಾಗೂ ಗೃಹ ಕೈಗಾರಿಕೆಗಳು ಮಾರುಕಟ್ಟೆಂಯ ಬೆಂಬಲವನ್ನು ಕಳೆದುಕೊಂಡಿವೆ ಎನ್ನಬಹುದು. ಇಲ್ಲಿ ದುಡಿಯುತ್ತಿರುವ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಉದ್ಯೋಗ ಕಳೆದುಕೊಂಡಿದ್ದಾರೆ. ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಮಹಿಳೆಯರು ಸ್ಥಳೀಯ ಕಚ್ಚಾ ಸಾಮಗ್ರಿ ಬಳಸಿ ತಯಾರಿಸುತ್ತಿದ್ದ ಪೊರಕೆ, ಬುಟ್ಟಿ, ಚಾಪೆ, ಕರಕುಶಲ ವಸ್ತುಗಳು ಪ್ಲಾಸ್ಟಿಕ ಮತ್ತು ಇತರೆ ವಸ್ತುಗಳು ಬಳಕೆ ಹೆಚ್ಚಾದ್ದರಿಂದ ಬೇಡಿಕೆ ಕಳೆದುಕೊಂಡು ಮಹಿಳೆಯರು ಅತಂತ್ರ ಸ್ಥಿತಿಯಲ್ಲಿದ್ದಾರೆ.

೩. ಅಸಂಘಟಿತ ವಲಯದಲ್ಲಿ ಮಹಿಳೆಯರು ಸಂಘಟಿತ ವಲಯದ ಕೆಲಸಗಾರರಿಗಿಂತ ಹೆಚ್ಚು ಕಾಲ ದುಡಿಯುತ್ತಿರುತ್ತಾರೆ ಆದರೆ ಈ ಹೆಚ್ಚಿನ ಅವಧಿಗೆ ವೇತನ ಪಡೆಯುವುದಿಲ್ಲ

೪. "ಸಮಾನವೇತನ ಕಾಯ್ದೆ" ಹಾಗೂ ಕನಿಷ್ಠ ವೇತನ ಕಾಯ್ದೆಗಳು ಈ ವಲಯದಲ್ಲಿ ಜಾರಿಗೊಳ್ಳದೆ ಇರುವುದರಿಂದ ಮಹಿಳೆಯರು ಕಡಿಮೆ ವೇತನ ಹಾಗೂ ವೇತನ ತಾರತಮ್ಯವನ್ನು ಎದುರಿಸುತ್ತಿರುತ್ತಾರೆ.

೫. ಮಹಿಳೆಯರನ್ನು ಕೆಲಸಕ್ಕೆ ನೇಮಿಸುವುದು, ತೆಗೆದುಹಾಕುವುದು, ವೇತನ ನಿಗಧಿಪಡಿಸುವುದು, ಸೌಲಭ್ಯಗಳನ್ನು ಒದಗಿಸುವುದು ಮುಂತಾದವು ಮಾಲೀಕರ ಇಚ್ಛಾನುಸಾರ ನಡೆಯುತ್ತಿರುತ್ತದೆ. ಕೊನೆಯಲ್ಲಿ ನೇಮಕಗೊಂಡು ಮೊದಲು ಕೆಲಸದಿಂದ ತೆಗೆದುಹಾಕಲ್ಪಡುವ ಕೆಲಸಗಾರರಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿರುತ್ತಾರೆ.

೬. ಅಸಂಘಟಿತ ವಲಯದಲ್ಲಿನ ಗುಡಿಕೈಗಾರಿಕೆಯಲ್ಲಿನ ಮಹಿಳೆಯರು ಕಡಿಮೆ ಮಟ್ಟದ ತಂತ್ರಜ್ಞಾನ ಬಳಸಿ ದೈಹಿಕ ಶ್ರಮ ಹೆಚ್ಚಿಸುವ ಕೈ ಬೆರಳುಗಳನ್ನು ಬಳಸಿಮಾಡುವ ಏಕತಾನತೆಯ ಕೆಲಸಗಳು ಹೆಚ್ಚಾಗಿರುತ್ತವೆ. ಇಂಥಹ ಶ್ರಾಮದಾಯಕ ದೀರ್ಘ ಕಾಲದ ಕೆಲಸಗಳ ಜೊತೆಗೆ ಮಹಿಳೆಯರು ತಮ್ಮ ಸಾಂಪ್ರದಾಯಿಕ ಪಾತ್ರದಲ್ಲಿ ಮನೆ ಕೆಲಸ, ಗಂಡ–ಮಕ್ಕಳು, ವೃದ್ಧರು ಹಾಗೂ ರೋಗಿಗಳನ್ನು ನೋಡಿಕೊಳ್ಳುವ ಕೆಲಸಗಳನ್ನು ಮಾಡಬೇಕು.

೭. ಗುಡಿಕೈಗಾರಿಕೆಗಳ ಮಹಿಳೆಯರು ಪ್ಲೆಕ್ಸಿಬಲ್ ಆಗಿರುವ ಕೆಲಸಕಾರ್ಯಗಳನ್ನು ಮಾಡುತ್ತಾರೆ. ಮನೆ ಕೆಲಸಗಳು ಖಾಲಿ ಇದ್ದಾಗ ಋತುಮಾನಕ್ಕೆ ಸಂಭಂಧಿಸಿದ ಕೆಲಸ ಗುತ್ತಿಗೆ ಆಧಾರಿತ ಕೆಲಸಗಳಲ್ಲಿ ತೊಡಗುವುದು ಪ್ಲೆಕ್ಸಿಬಿಲಿಟಿ ಕೆಲಸಗಳ ಗುಣಗಳು ಕಡಿಮೆ ವೇತನ ದೈಹಿಕ ಶ್ರಮದ ಹಾಗು ಏಕಾತನತೆಯ ಕೆಲಸಗಳಲ್ಲಿ ತೊಡಗುವಂತೆ ಮಾಡುತ್ತದೆ

ಈ ಮೇಲ್ಕಂಡ ಆರ್ಥಿಕ ಸ್ಥೀತಿಗತಿಗಳು ಗಮನಿಸಿದಾಗ ಮಹಿಳೆಯು ಅತಂತ್ರ ಸ್ಥೀತಿಯಲ್ಲಿರುವುದು ಕಂಡುಬರುತ್ತದೆ ಗುಡಿಕೈಗಾರಿಕೆಗಳಲ್ಲಿ ಮಹಿಳೆ ಕೌಟುಂಬಿಕ ಸಮಸ್ಯೆಗಳನ್ನೇ ಗುಡಿ ಕೈಗಾರಿಕೆಗಳಿಗೆ ಬೆಂಬಲವಿಲ್ಲದಂತಾಗಿದೆ ಎಂದು ತಿಳಿದುಬರುತ್ತದೆ. ತಾವು ಮಾಡಿದ ಖೌದಿ ಹೆಣಿಕೆ, ಕಸೂತಿ, ಕುಂಬಾರರ ಮಡಿಕೆ, ಕುಡಿಕೆ, ಕುಂಡಲಗಳ, ಪಾದರಕ್ಷೆಯ ವಿನ್ಯಾಸಗಳು ಇನ್ನಿತರ ರಂಗಗಳಲ್ಲಿ ಎಲ್ಲ ಗುಡಿಕೈಗಾರಿಕೆಗಳು ಕೂಡ ತಯಾರಿಸಿದ ವಸ್ತುಗಳು ಉತ್ತಮ ಬೆಲೆಗೆ ಮಾರಾಟವಾಗದೆ ಅಸಲೂ ಕೂಡ ಸಿಗಲಾರದಷ್ಟು ಕಡಿಮೆ ಬೆಲೆಗೆ ಅವುಗಳನ್ನು ಮಾರಾಟ ಮಾಡಬೇಕಾದ ಪರಿಸ್ಥಿತಿಯು

ನಿರ್ಮಾಣವಾಗಿದೆ. ನಮ್ಮ ಭಾರತೀಯ ಮಾರುಕಟ್ಟೆಗಳಲ್ಲಿ ವಿದೇಶದ ವಸ್ತುಗಳಿಗೆ ಕೊಡುವಷ್ಟು ಪ್ರಾಶಸ್ತ್ಯ ಸ್ವದೇಶಿ ವಸ್ತುಗಳಿಗೆ ಕೊಡುವುದಿಲ್ಲವಾಗಿದೆ. ಇದರಿಂದ ಸಣ್ಣಮಟ್ಟ ಗುಡಿಕೈಗಾರಿಕೆಗಳಲ್ಲಿ ಕೆಲಸ ಮಾಡುವ ಮಹಿಳೆಯರ ಕೈಗಾರಿಕೆಗಳು ನಶಿಸುತ್ತಿವೆ. ಇವರ ಆರ್ಥಿಕ ಸ್ಥಿತಿಯು ದುರ್ಬಲಸ್ಥಿತಿಯಲ್ಲಿವೆ ಎಂದು ಹೇಳಬಹುದಾಗಿದೆ.

**೩.೨ ಸಾಮಾಜಿಕ ಸ್ಥಿತಿಗತಿಗಳು**

ಮಾನವ ಸಮಾಜವನ್ನು ಸೃಷ್ಟಿಸಿದಾಗಿನಿಂದಲೂ ಸ್ತ್ರೀಪುರುಷರು ಜೊತೆಯಾಗಿ ಕೆಲಸವನ್ನು ನಿರ್ವಹಿಸುತ್ತಾ ಬಂದಿದ್ದಾರೆ. ಯಾವುದೇ ಹಂತದಲ್ಲಿ ಪುರುಷರ ಕೆಲಸ ದುಡಿಮೆ ಎನಿಸಿಕೊಳ್ಳಲಾರಂಭಿಸಿದರೆ, ಸ್ತ್ರೀಯರ ಕೆಲಸ ಕರ್ತವ್ಯವಾಗಿ; ಪ್ರಕೃತಿ ಜನ್ಯವಾಗಿ ಮುಂದುವರೆಯಿತು. ಎಲ್ಲಿಯವರೆಗೆ ಇಬ್ಬರ ಮಧ್ಯೆ ತಾರತಮ್ಯ ಭೇಧಭಾವಗಳಿರಲಿಲ್ಲವೋ ಯಾವ ದುಡಿಮೆಯು ಮಾರುಕಟ್ಟೆಯಲ್ಲಿ ವಿನಿಮಯವಾಗ ತೊಡಗಿತೋ ಆಗಲೇ ಕಸಲವು ದುಡಿಮೆ ಎಂದು ಪರಿಗಣಿಸಲ್ಪಟ್ಟಿತು.

ಈ ರೀತಿಯ ಮಹಿಳಾ ದುಡಿಮೆಗಾರರಲ್ಲಿ ಗೃಹಕೃತ್ಯಗಳನ್ನು ಮಾಡಿಕೊಂಡು ಸಣ್ಣಮಟ್ಟ ಕೈಗಾರಿಕೆಗಳನ್ನು ಮಾಡಿಕೊಂಡು ಜೀವನವನ್ನು ನಡೆಸುವರು ಕಂಡುಬರುತ್ತಾರೆ. ಇದರಲ್ಲಿ ಬೀಡಿ ಕಾರ್ಮಿಕರು, ಚಾಪೆ ಹೆಣೆಯುವವರು, ಕೌದಿ ಹೆಣೆಯುವವರು, ಕುಂಬಾರಿಕೆ, ಚಮ್ಮಾರಿಕೆ ಇನ್ನಿತರೆ ಹಲವಾರು ಗುಡಿಕೈಗಾರಿಕೆಗಳಲ್ಲಿ ಮಹಿಳೆಯರು ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ ಎಂದು ಹೇಳಬಹುದಾಗಿದೆ. ಇವರು ತಮ್ಮ ಕೌಶಲ್ಯದಿಂದ ಗೃಹೋಪಯೋಗಿ ವಸ್ತುಗಳನ್ನು ಸಿದ್ಧಪಡಿಸುತ್ತಾರೆ. ಇವರು ಎಷ್ಟೇ ಕೌಶಲ್ಯದಿಂದ ಕಾರ್ಯನಿರ್ವಹಿಸಿದರೂ ಅಲ್ಲಿ ಪುರುಷನಿಗೆ ಹೆಚ್ಚಿನ ಹೆಸರು ಕೇಳಿಬರುತ್ತದೆ ಸಮಾಜದಲ್ಲಿ ಹೆಚ್ಚಾಗಿ ಪುರುಷನಿಗೆ ಇದ್ದಷ್ಟು ಗೌರವ ಪ್ರತಿಷ್ಠೆಯು ಸ್ತ್ರೀಗೆ ಕಾಣಸಿಗುವುದಿಲ್ಲವಾಗಿದೆ. ಮಹಿಳೆಯು ಮನೆಯೊಳಗಿನ ಕೌಶಲ್ಯತೆಯನ್ನು ತೋರ್ಪಡಿಸುವ ಒಂದು ವಸ್ತುವಾಗಿ ಪುರುಷನ ಕೌಶಲ್ಯವನ್ನು ಮಾರಾಟ ಮಾಡಿ ಅದರಿಂದ ಸುಖವಾಗಿ ಜೀವನ ನಡೆಸುವವನು ಪುರುಷನಾಗಿರುತ್ತಾನೆ. ಮಹಿಳಾ ಕೌಶಲ್ಯವು ಒಂದು ಕುಟುಂಬಕ್ಕೆ ಸಂಬಂಧಪಟ್ಟಿರುತ್ತದೆಯೇ ವಿನಃ ಒಂದು ಸಮಾಜಕ್ಕೆ ಆ ಕೌಶಲ್ಯದ ಅವಶ್ಯಕತೆಯಿಲ್ಲವಾಗಿದೆ ಎಂದು ತೋರ್ಪಡಿಸುತ್ತದೆ. ಇಲ್ಲಿ ಮಹಿಳೆಯರು ಮನೆಯಲ್ಲಿ ಏನೆಲ್ಲ ಮಾಡಿದರೂ ಕೊನೆಗೂ ಪುರುಷನ ಹೆಸರಿನಿಂದಲೇ ಆ ಕಲೆಗೆ ಅಲಂಕೃತವಾಗುತ್ತದೆ. ಈ ಕೌದಿ ಹೆಣಿಕೆ, ಕಸೂತಿ ಹೆಣಿಕೆ, ಕುಂಬಾರಿಕೆ, ಚಮ್ಮಾರಿಕೆ ಇನ್ನಿತರೆ ವರ್ಗಗಳಲ್ಲಿನ ಮಹಿಳೆಯರನ್ನು ನೋಡಿದರೆ ಅಲ್ಲಿನ ಸಾಮಾಜಿಕವಾಗಿ ಈ ಜನಾಂಗಗಳಲ್ಲಿ ಇವರ ಸಂಪ್ರದಾಯಗಳಲ್ಲಿ ಎಲ್ಲ ಕಾರ್ಯಗಳಲ್ಲಿ

ಪುರುಷನೇ ನಿರ್ವಹಣೆ ಮಾಡುತ್ತಾನೆ. ಇಲ್ಲಿ ಮಹಿಳೆಯು ತನ್ನ ಕೈಗಾರಿಕೆ ಕೆಲಸಗಳನ್ನು ಮಾಡಿಕೊಂಡು ಮನೆಯಲ್ಲಿನ ಕುಟುಂಬದ ಸದಸ್ಯರಿಗೆ ಅಡುಗೆ ಮಾಡಬೇಕು. ಮನೆಯಲ್ಲಿ ಕುಳಿತುಕೊಂಡು, ಕೌದಿ ಹೆಣಿಕೆ, ಕಸೂತಿ, ಕುಂಬಾರಿಕೆ, ಚಮ್ಮಾರಿಕೆಯನ್ನೇ ಮಾಡಿಕೊಂಡು ಅವುಗಳಿಗೆ ತನ್ನ ಕೌಶಲ್ಯವನ್ನು ಬಳಸಿಕೊಂಡು ಅವುಗಳಿಗೆ ಉತ್ತಮ ಬೆಲೆ ಕಟ್ಟಿಕೊಳ್ಳಲು ಮಹಿಳೆಯು ಅಸಹಾಯಕಳಾಗಿರುತ್ತಾಳೆ. ಇಲ್ಲಿ ಮಹಿಳೆಯರ ಮನೆಯವರ ಬೆಂಬಲವಿರುವಿದಲ್ಲವಾಗಿದೆ. ಸಮಾಜದಲ್ಲಿ ಯಾವುದೇ ರೀತಿಯ ಬೆಂಗಲಗಳು ಪ್ರೋತ್ಸಾಹಗಳು ಇವರಿಗೆ ಇರುವುದಿಲ್ಲವಾಗಿದೆ. ಈ ಕುಟುಂಬಗಳಲ್ಲಿ ಮಹಿಳೆಯರಿಗೆ ಯಾವುದೇ ಸಭೆ ಸಮಾರಂಭಗಳಲ್ಲಿ ಪ್ರವೇಶವಿರುವುದಿಲ್ಲವಾಗಿದೆ. ಯಾವುದೇ ಸರ್ಕಾರದ ಯೋಜನೆಗಳು ಇವರ ಮನೆ ಬಾಗಿಲಿಗೆ ಪ್ರವೇಶ ಕೊಡುವುದಿಲ್ಲವಾಗಿದೆ. ಮಹಿಳೆಯು ಈ ರೀತಿಯಲ್ಲಿ ಸಾಮಾಜಿಕ ಪರಿಸರದಲ್ಲಿ ದುರ್ಬಲ ವ್ಯವಸ್ಥೆಯನ್ನು ತಲುಪಿರುವುದು ವಿಷಾದದ ವಿಷಯವಾಗಿದೆ ಎಂದು ಹೇಳಬಹುದಾಗಿದೆ.

**೩.೩ ಸಾಂಪ್ರದಾಯಿಕ ಕೌಶಲ್ಯ**

**ಪ್ರಸ್ತಾವನೆ**

ಸಮುದಾಯಗಳಲ್ಲಿ ಬಹಳ ಹಿಂದಿನ ಕಾಲದಿಂದ ರೂಢಿಸಿಕೊಂಡು ಬಂದಂತಹ ಆಚರಣೆ ವೃತ್ತಿ ಧರ್ಮ ರೂಢಿ ಸಂಪ್ರದಾಯಗಳು ಇನ್ನಿತರೆಗಳು ಸೇರಿಸಿ ಎಲ್ಲವನ್ನು ಸಾಂಪ್ರದಾಯಿಕ ಕೌಶಲ್ಯ ಎನ್ನಬಹುದು. ಈ ಸಾಂಪ್ರದಾಯಿಕ ಕೌಶಲ್ಯಗಳಲ್ಲಿ ಮೊದಲನೆಯದಾಗಿ ಗುಡಿ ಕೈಗಾರಿಕೆಗಳು, ಸಾಂಪ್ರದಾಯಿಕ ಕೌಶಲ್ಯವನ್ನು ಪ್ರಾರಂಭಿಸಿದವು. ಅಂದಿನಿಂದ ಇಂದಿನವರೆಗೂ ಸಾಂಪ್ರದಾಯಿಕ ನೆಲೆಯಲ್ಲಿ ಗುಡಿ ಕೈಗಾರಿಕೆಗಳು ನಡೆಯುತ್ತಾ ಬಂದಿವೆ. ಈಗಲೂ ಕೂಡ ಹಳ್ಳಿಗಳಲ್ಲಿ ಅವರ ಆಚಾರ ಸಂಪ್ರದಾಯ ಜಾತಿಗಳಿಗನುಗುಣವಾಗಿ ಒಂದೊಂದು ಕೌಶಲ್ಯ ಕಲೆಗಳು ನೆಲೆಗೊಂಡಿವೆ. ಈ ಸಾಂಪ್ರದಾಯಿಕತೆ ಎನ್ನುವ ಪದವು ನಮ್ಮ ಪೂರ್ವಿಕರಿಂದ ಬಂದಂಥ ಪದವಾಗಿದೆ. ಇಲ್ಲಿ ಸಾಂಪ್ರದಾಯದ ನೆಲೆಯಲ್ಲಿ ಗುಡಿ ಕೈಗಾರಿಕೆಗಳು ತಮ್ಮ ವೃತ್ತಿ ನಿಯಮವನ್ನು ಈಗಿನವರೆಗೂ ಪಾಲಿಸುತ್ತಾ ಬಂದಿವೆ.

**೩.೩.೧ ಕಸೂತಿ ಕಲೆಯಲ್ಲಿ ಮಹಿಳೆಯ ಸಾಂಪ್ರದಾಯಿಕ ಕೌಶಲ್ಯ**

ಲಂಬಾಣಿಗರೆಂದರೆ ಮೊದಲು ಗುರುತಿಸುವುದು ಲಂಬಾಣಿ ಸಂಪ್ರದಾಯಗಳಿಂದ ವೇಷ ಭೂಷಣಗಳಿಂದ ಮತ್ತು ಕಸೂತಿ ಕಲೆಯಿಂದ ಲಂಬಾಣಿಗರು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ವಿಶೇಷವಾಗಿ ಲಂಬಾಣಿಗಳಲ್ಲಿ ಗಮನಿಸುವುದಾದರೆ ಕಸೂತಿ ಕಲೆಗಳಲ್ಲಿ ಲಂಬಾಣಿಗರದ್ದು ಎತ್ತಿದ ಕೈ.

ತಾವು ಹಾಕಿಕೊಳ್ಳುವ ಉಡುಪುಗಳಿಗೆ ತಾವೇ ಕಸೂತಿ ಹಾಕಿಕೊಳ್ಳುತ್ತಾರೆ. ಇವರ ಉಡುಪುಗಳು ತುಂಬಾ ಆಕರ್ಷಣೀಯವಾಗಿರುತ್ತೇವೆ. ತಮ್ಮ ಮೇಲೊದಿಕೆ ಕೆಂಪು ಬಣ್ಣದಿಂದ ಕೂಡಿರುವುದರಿಂದ ಕಂಚು, ಕನ್ನಡಿಗಳನ್ನು ವಿವಿಧ ಬಣ್ಣದ ಧಾರಗಳಲ್ಲಿ ಹಾಕಿ ಹೆಣೆದುಕೊಳುತ್ತಾರೆ. ಇವರು ಕಸೂತಿಯಲ್ಲಿ ಬಳಸುವ ಸಾಮನುಗಳೆಂದರೆ ಬೆಳ್ಳಿ, ಬಂಗಾರ, ತಾಮ್ರ ಹಿತ್ತಾಳೆ, ಹಸ್ತದಂತೆ ಕಟ್ಟಿಗೆ ದಿಂಡು, ಬೆಂಡುಗಳು, ಗಾಜಿನ ಬಿಲ್ಲೆಗಳು, ಮಿಶ್ರದಾತುಗಳು ಪಾವಲತವರ ಉಣ್ಣಿಯ ಝೂಂಡಿ ಗೊಂಡೆ ಇತರೆ ಎಲ್ಲಾ ವಸ್ತುಗಳನ್ನು ಮೂಲವಾಗಿಟ್ಟುಕೊಂಡು ತಮ್ಮ ಉಡುಪುಗಳನ್ನು ವಿವಿಧ ಮಾದರಿಯಲ್ಲಿ ಹೊಲಿದು ಹೆಚ್ಚು ಆಕರ್ಷಣಿಯವಾಗಿ ಕಾಣುವಂತೆ ಮಾಡಿಕೊಳ್ಳತ್ತಾರೆ.

ಕಸೂತಿ ಕಲೆಯು ಸಾಂಪ್ರದಾಯಿಕ ಮತ್ತು ಸಾಮುದಾಯಿಕ ಕಲೆ ಆಗಿದ್ದು, ವಿಶೇಷ ತರಬೇತಿ ಏನು ಬೇಕಾಗುವುದಿಲ್ಲ ಬಣ್ಣ ಬಣ್ಣದ ದಾರಗಳಿಂದ ವಿವಿಧ ಕಸೂತಿಯನ್ನು ಹಾಕಿಕೊಳ್ಳುತ್ತಾರೆ ಅವರ ಭಾಷೆಯಲ್ಲಿ ಹೇಳುವುದಾದರೆ ಸಾಲು ನೊಣಗಳು ಪಿಸ್‌ಘರ(ನಾಣ್ಯದ ಮನೆಗಳು) ಕೊತದಾರಕ(ನಾಯಿ ಉಗುರು)ಇವುಗಳನ್ನು ಮೇಲು ಹೊಂದಿಕೆಗೆ ಹಾಕಿ ಶೃಂಗರಿಸುತ್ತಾರೆ. ಮಹಿಳೆಯರು ಮನೆ ಕೆಲಸ ಮುಗಿದ ಇದನ್ನು ಹೆಣೆಯುವುದೆ ಅವರ ಉದ್ಯೋಗವಾಗಿರುತ್ತದೆ ಇನ್ನು ಕಾಂಬಾಳಿ(ಕುಪ್ಪಸ)ಗಳು ಮೇಲೆ ಫೇಟಯಾ(ಲಂಗ) ಘಾಂಟಿಯಾ ಮೇಲು ಹೊದಿಕೆ ಮೇಲೆ ತಮ್ಮ ಎಲ್ಲಾ ಕಸೂತಿ ಕಲೆ ಮೂಡಿ ಬರುತ್ತದೆ ಹೀಗೆ ವಿಧವಿಧವಾದ ಆಕಾರಗಳಲ್ಲಿ ಬಣ್ಣಗಳಲ್ಲಿ ಕಸೂತಿ ಹೆಣೆದುಕೊಳ್ಳುತ್ತಾರೆ. ಹೆಚ್ಚು ಅಕರ್ಷಣೀಯವಾಗಿರುತ್ತದೆ. ಹಾಕುವವರು ಮತ್ತು ಹೆಣೆಯುವವರು ಮಹಿಳೆಯರೇ ಆಗಿರುತ್ತಾರೆ ಎಂದು ಹೇಳಬಹುದಾಗಿದೆ.

**೩.೩.೨ ಕೌದಿ ಎಣಿಕೆಯಲ್ಲಿ ಸಾಂಪ್ರದಾಯಿಕ ಕೌಶಲ್ಯ**

ಮಹಿಳೆಯು ಬಹಳ ಹಿಂದಿನ ಕಾಲದಿಂದಲೂ ಕೌದಿ ಎಣಿಕೆಯಲ್ಲಿ ತನ್ನ ಕೌಶಲ್ಯವನ್ನು ಗುರುತಿಸಿಕೊಂಡಿದ್ದಾಳೆ ಎಂದು ಹೇಳಬಹುದಾಗಿದೆ. ಇಲ್ಲಿ ಮಹಿಳೆಯು ಯಾವ ಪುರುಷನ ಸಹಾಯ ಸಹಕಾರಗಳಿಲ್ಲದೆ ಮಹಿಳೆಯೊಬ್ಬಳೆ ಎಣಿಕೆಯನ್ನು ಮಾಡಿ ಕೌದಿಯನ್ನು ತಯಾರಿಸುವ ಒಂದು ಕೌಶಲ್ಯದಿಂದಲೆ ಮಹಿಳೆಯು ಗುರುತಿಸಿಕೊಂಡಿದ್ದಾಳೆ.

ಮೊದಲನೆಯದಾಗಿ ದೊಡ್ಡ ಬಟ್ಟೆಗಳ ತುಂಡುಗಳನ್ನು ಕೆಳಗಡೆ ಹೊಂದಿಸಿಕೊಳ್ಳುತ್ತಾರೆ ನಂತರ ಅದರ ಮೇಲೆ ಚಿಕ್ಕ ತುಂಡನ್ನು ಹಾಕಿ ಅದರ ಮೇಲೆ ಮತ್ತೆ ದೊಡ್ಡ ತುಂಡಗಳನ್ನು ಹೊಂದಿಸುತ್ತಾರೆ ನಂತರ ದೂರದೂರ ಎರಡು ಗೇಣಿಗೊಂದುರಂತೆ ಹೋಲಿಗೆ ಹಾಕತ್ತಾರೆ ಕೋನೆಗೆ ಆ ಬಟ್ಟೆಯ

ಅಂಚನ್ನು ಒಳಭಾಗಕ್ಕೆ ಮಡಚಿ ಸುತ್ತಲೂ ಹೋಲಿಗೆ ಹಾಕುತ್ತಾರೆ ಇದರಲ್ಲಿ ಮೇಲ್ಪದರದ ಬಟ್ಟೆಗಳನ್ನು ಬಹಳ ಆಕರ್ಷಕವಾಗಿ ಕಾಣುವಂತೆ ಹೊಂದಿಸುತ್ತಾರೆ ಎಷ್ಟೆ ಚಿಕ್ಕ ತುಂಡುಗಳಿದ್ದರು ಅವುಗಳನ್ನು ಕ್ರಮಬದ್ಧವಾಗಿ ಜೋಡಿಸುತ್ತಾರೆ. ಕೊನೆಗೆ ದೂರದೂರದಲ್ಲಿ ಹಾಕಿದ ದಾರವನ್ನು ಬಿಚ್ಚಿಡುತ್ತಾರೆ ಈ ರೀತಿಯಾಗಿ ಕೌದಿಯು ಬಹಳ ಅಕರ್ಷಕವಾಗಿ ಕಾಣಿಸುವುದು.

ಮಹಿಳೆಯು ಕೌದಿ ಎಣಿಕೆಯಲ್ಲಿ ತನ್ನ ಕೌಶಲ್ಯವನ್ನು ತುಂಬಾ ಅತ್ಯುತ್ತಮವಾಗಿ ತೋರ್ಪಡಿಸುತ್ತಾರೆ. ಎಲ್ಲಾ ತಂತ್ರಜ್ಞಾನಗಳಲ್ಲಿ, ಕೈಮಗ್ಗ ಕೇಂದ್ರಗಳಲ್ಲಿ ಹೊಸ ವಸ್ತುಗಳನ್ನು ಬಳಸಿ ಬಣ್ಣಗಳು, ದಾರಗಳು, ರೇಶ್ಮೆಗಳು ಉಣ್ಣೆಗಳು ಇನ್ನಿತರೆ ಯಂತ್ರೋಪಕರಣಗಳು ಎಲ್ಲ ಬಳಸಿದರೂ ಕೂಡ ಅವು ದುಬಾರಿಯುತ ಹಾಸಿಗೆಗಳಾಗಿರುತ್ತವೆ ಮತ್ತು ಇವುಗಳು ಬಡವರ ಕೈಗೆ ಎಟುಕದ ಸ್ಥಿತಿಯಲ್ಲಿರುತ್ತವೆ. ಅದರೆ ಇಲ್ಲಿ ಚಳಿಗಾಲದಲ್ಲಿ ಚಳಿಯಿಂದ ರಕ್ಷಿಸಿಕೊಳ್ಳಲು ಜನಸಾಮಾನ್ಯರು ಕೌದಿಯನ್ನು ಹೆಚ್ಚಾಗಿ ಬಳಸುತ್ತಾರೆ. ಎಂದು ತಿಳಿದುಬರುತ್ತದೆ. ಏಕೆಂದರೆ ಇವುಗಳು ಅತಿ ಕಡಿಮೆ ಬೆಲೆಯಲ್ಲಿ ತಯಾರಾಗುತ್ತವೆ. ಇಲ್ಲಿ ಕೌದಿ ಹೊಲೆಯುವ ಕೂಲಿ ಮಾತ್ರವೇ ಹೊರತು ಇತರೆ ಯಾವುದೇ ರೀತಿಯ ಖರ್ಚುಗಳು ಇಲ್ಲಿ ಬರುವುದಿಲ್ಲವಾಗಿದೆ ಕೌದಿ ಮನೆಯಲ್ಲಿನ ಹಳೆಯ ಬಟ್ಟೆಗಳ ಮೇಲೆ ಎಷ್ಟು ದೊಡ್ಡದಾಗುತ್ತದೆ ಎಂದು ತಿಳಿದುಕೊಳ್ಳಬಹುದಾಗಿದೆ. ಇದರಿಂದ ಮಹಿಳೆಯು ದೊಡ್ಡ ಬಟ್ಟೆಗಳನ್ನು ಕೆಳಗಡೆ ಹಾಕಿ ಅವುಗಳ ಮೇಲೆ ಚಿಕ್ಕಪುಟ್ಟ ಬಟ್ಟೆಗಳನ್ನೆ ಜೋಡಿಸಿಕೊಂಡು ಎರಡು ಗೇಣಿಗೆ ತಕ್ಕಂತೆ ಹೊಲಿಗೆಗಳನ್ನು ಹಾಕಿಕೊಂಡು ನಂತರ ಕೌದಿಯನ್ನು ಹೊಲಿಯಲು ಪ್ರಾರಂಭಿಸುತ್ತಾಳೆ. ಇಲ್ಲಿ ಮಹಿಳೆಯು ನಿರುಪಯುಕ್ತ ಬಟ್ಟೆಗಳನ್ನು ಜೋಡಿಸಿ ಹೊಲೆದು ಆ ನಿರುಪಯುಕ್ತ ಬಟ್ಟೆಗಳನ್ನು ಇಲ್ಲಿ ಉಪಯುಕ್ತ ಬಟ್ಟೆಗಳನ್ನಾಗಿ ಮಾಡಿ ಒಟ್ಟುಗೂಡಿಸಿ ಒಂದು ಅಂದವಾದ ಬಣ್ಣಬಣ್ಣದ ಖೌದಿಯನ್ನು ಹೆಣೆಯುವ ಕೌಶಲ್ಯವನ್ನು ಮಹಿಳೆಯು ಹೊಂದಿದ್ದಾಳೆ. ಎಂದು ಹೇಳಬಹುದಾಗಿದೆ.

**ಖೌದಿ ಹೆಣಿಕೆಯನ್ನು ಮಾಡುತ್ತಿರುವ ಮಹಿಳೆಯ ಬದುಕು**

ಹಿಂದಿನ ಕಾಲದಿಂದಲೂ ಖೌದಿ ಹೇಣಿಕೆಯನ್ನು ಕಾಣಬಹುದಾಗಿದೆ ಆದರೆ ತಂತ್ರಜ್ಞಾನದ ಬಳಕೆ ಆಧುನಿಕತೆಯಿಂದಾಗಿ ಖೌದಿಗಳ ಬಳಕೆ ತುಂಬಾ ಕಡಿಮೆಯಾಗಿವೆ ಎಂದು ಹೇಳಬಹುದು. ಈ ಕಲೆಯು ಅವನತಿಯತ್ತ ಸಾಗಿದೆ ಎಂತಲೂ ಹೇಳಬಹುದು ಶ್ರೀಮಂತ ವರ್ಗದವರು ಈ ಖೌದಿಗಳ ಬಳಕೆಯನ್ನು ಸಂಪೂರ್ಣ ನಿಲ್ಲಿಸಿ ಗಾದಿ, ಬೆಡ್‌ಗಳಂತಹ ಹೊಸ ಹೊಸ ಆಧುನಿಕವಸ್ತುಗಳನ್ನೆ ಬಳಸಿ ತಯಾರಿಸಿ ಅವುಗಳನ್ನು ಹೆಚ್ಚಾಗಿ ಬಳಸುತ್ತಿದ್ದಾರೆ. ಈ ಖೌದಿಗಳು ಮಧ್ಯಮ ವರ್ಗದವರಲ್ಲಿ ಹೆಚ್ಚಾಗಿ

ಬಳಕೆಯಲ್ಲಿ ಕಾಣಬಹುದಾಗಿದೆ. ಏಕೆಂದರೆ ಅವರ ಆದಾಯಕ್ಕೆ ತಕ್ಕಂತೆ ಅವರು ಬಳಕೆಯ ವಸ್ತುಗಳನ್ನು ಮರುಬಳಕೆಯ ವಸ್ತುಗಳನ್ನಾಗಿ ಬಳಸುತ್ತಿದ್ದಾರೆ ಹೀಗಾಗಿ ಇನ್ನೂ ಈ ಖೌದಿಯ ಬಳಕೆಯನ್ನು ಕಾಣಬಹುದುದಾಗಿದೆ ಖೌದಿ ಹೆಣಿಕೆಗಾರರು ಮಧ್ಯಮ ವರ್ಗದವರೇ ಆಗಲಿ ಶ್ರೀಮಂತ ವರ್ಗದವರೇ ಆಗಲಿ ಹಳೆಯ ಬಟ್ಟೆಗಳನ್ನು ಜೋಡಿಸಿ ಕೊಡುವವರೆಗೆ ಕಾಯಬೇಕಾಗುತ್ತದೆ ಹೆಚ್ಚಿನ ಶ್ರಮವಹಿಸಿ ಖೌದಿಗಳನ್ನು ಹೊಲೆದು ಕೊಟ್ಟಿರುವವರಿಗೆ ಸಿಗುವ ಹಣ ಮಾತ್ರ ಕಡಿಮೆ ಹೀಗಾಗಿ ಜೀವನ ನಿರ್ವಹಣೆಯೂ ಕೂಡ ಇವರಿಗೆ ಕಷ್ಟವಾಗುತ್ತಿದೆ ಎಂದು ಹೇಳಬಹುದು.

ಕೌದಿ ಹೆಣಿಕೆ ಮಾಡುತ್ತಿರುವ ಮಹಿಳೆಯರ ಆರ್ಥಿಕ ಬದುಕು ದುಸ್ಥರವಾಗಿದೆ. ಈ ಮಹಿಳೆಯರಿಗೆ ದಿನವೂ ಈ ವೃತ್ತಿಯು ಇರುವುದಿಲ್ಲ ಶ್ರಿಮಂತರ ಮನೆಯಲ್ಲಿ ಹಳೆಬಟ್ಟೆಗಳು ಕೂಡಿದರೆ ಮಾತ್ರ ಇವರ ಜೀವನ ನಿರ್ವಹಣೆಯಾಗಿರುತ್ತದೆ. ಇದರಲ್ಲಿ ಮಹಿಳೆಯರು ಈ ಕಸುಬಿನಲ್ಲಿ ೩೦ ವರ್ಷಗಳಿಂದ ಜೀವನ ನಿರ್ವಹಣೆ ಮಾಡುತ್ತಾ ಬಂದಿದ್ದಾರೆ ಕಂಪ್ಲಿಯಲ್ಲಿನ ಮುಚಗೇರ ಬಸಮ್ಮನವರು ಹೇಳುವ ರೀತಿಯಲ್ಲಿ ಇವರು ಯಾವುದೇ ರೀತಿಯಲ್ಲಿ ಆರ್ಥಿಕವಾಗಿ ರಾಜಕೀಯವಾಗಿ ಮುಂದುವರೆದಿಲ್ಲವಾಗಿದೆ. ಮತ್ತು ಯಾವುದೆ ರೀತಿಯಲ್ಲಿ ಸರ್ಕಾರಿ ಸವಲತ್ತುಗಳು ದೊರೆತಿಲ್ಲವಾಗಿದೆ. ಸ್ವಸಹಾಯ ಸಂಘದಿಂದ, ಬ್ಯಾಂಕ್‌ಗಳಿಂದ ಯಾವುದೆ ರೀತಿಯಲ್ಲಿ ಆರ್ಥಿಕ ಸಹಾಯ ಕೂಡ ದೊರೆತಿರುವುದಿಲ್ಲವಾಗಿದೆ ಇವರಿಗೆ ಸಾಮಾಜಿಕ ಮನ್ನಣೆಯನ್ನು ಕೊಡುವುದಿಲ್ಲವಾಗಿದೆ. ಇವರು ಸಮಾಜದಲ್ಲಿ ಯಾವ ರೀತಿಯಿಂದಲೂ ಕೂಡ ದೂರವಿಲ್ಲವಾಗಿದ್ದಾರೆ ಖೌದಿ ಹೆಣಿಕೆಯಿಂದ ಸಂಸಾರವನ್ನು ತೂಗಿಸಿಕೊಂಡು ಮಗನನ್ನು ಸಾಕಿ ಇದರಿಂದ ಅವನಿಗೆ ಜೀವನ ನಿರ್ವಹಣೆಗಾಗಿ ಆಘನಿಯನ್ನು ಕೊಡಿಸಿರುವುದು ಈ ಅಧ್ಯಯನದಲ್ಲಿ ಕಂಡು ಬಂದಿರುತ್ತವೆ ಅನೇಕ ರೀತಿಯ ಆಧುನಿಕ ತಂತ್ರಜ್ಞಾನಗಳು ಲಗ್ಗೆ ಇಟ್ಟರೂ ಕೂಡ ಸಮಾಜದಲ್ಲಿ ಮದ್ಯಮ ವರ್ಗದ ಜನರೆ ಹೆಚ್ಚಾಗಿ ಕಂಡುಬರುವುದರಿಂದ ಖೌದಿಯ ಅವಶ್ಯಕತೆಯು ಹೆಚ್ಚಾಗಿ ಕಂಡುಬರುತ್ತದೆ ಈ ರೀತಿಯಾಗಿ ಖೌದಿಯ ಅವಶ್ಯಕತೆಯು ಹೆಚ್ಚಾಗಿ ಕಂಡುಬರುತ್ತದೆ. ಈ ಆಧುನಿಕ ಯುಗದಲ್ಲಿ ಖೌದಿಯು ಪ್ರಮುಖ್ಯತೆಯನ್ನು ಇಲ್ಲಿ ಮನಗಾಣಲಾಗಿದೆ. ಈ ಕೌದಿಯ ಹೆಣಿಕೆಯಲ್ಲಿ ಮಹಿಳೆಯು ಹೆಚ್ಚಿನದಾಗಿ ಅಧಿಕ ಶ್ರಮವನ್ನು ವಹಿಸಿಕೊಂಡು ಕಡಿಮೆ ಕೂಲಿಯನ್ನು ತೆಗೆದುಕೊಂಡು ಖೌದಿಯನ್ನು ಹೆಣೆಯುವುದು ಕಂಡುಬರುತ್ತದೆ.

**ಖೌದಿ ಹೆಣೆಯುವ ಮುಚಗೇರ ಮಹಿಳೆಯರ ಸಾಮಾಜಿಕ ಬದುಕು**

ಮುಚಗೇರ ಮಹಿಳೆಯರ ಬದುಕು ಸಮಾಜದಲ್ಲಿ ಎಲ್ಲ ರೀತಿಯಲಿಂದಲೂ ಕೆಳಮಟ್ಟದಲ್ಲಿರುವುದು ಕಂಡು ಬರುತ್ತದೆ. ಅವರಿಗೆ ಮನೆಯಲ್ಲಿದ್ದುಕೊಂಡು ದುಡಿಯುವುದೇ ಒಂದು ಸ್ವತಂತ್ರದ ವಿಷಯವಾಗಿದೆ.

ಇನ್ನೂ ಅವರಿಗೆ ಹೊರಗಡೆಯ ಪ್ರಪಂಚದಲ್ಲಿ ಬದುಕಲು ಅವಕಾಶಗಳಿಲ್ಲ ಮನೆಯಲ್ಲಿದ್ದುಕೊಂಡೇ ವೃತ್ತಿಯನ್ನೇ ಮುಂದುವರೆಸಿಕೊಂಡು ಹೋಗುವುದು ಬಂದ ಸ್ವಲ್ಪ ಕೂಲಿಯಿಂದ ಮನೆಯನ್ನು ಸರಿದೂಗಿಸಿ ನಡೆಸುವುದು ಇವಳ ಕರ್ತವ್ಯವಾಗಿದೆ. ಮುಚಿಗೇರ ಮಹಿಳೆಯರು ಅವಿದ್ಯಾವಂತರು ೧೦೦ಕ್ಕೆ ಇಬ್ಬರು ಸರ್ಕಾರಿ ನೌಕರಿ ಮಾಡಿಕೊಂಡವರು. ಇವರಿಗೆ ವಿದ್ಯಾಭ್ಯಾಸದ ಕೊರತೆಯು ಕಂಡುಬರುತ್ತದೆ. ಇವರಲ್ಲಿ ವಿಧವಾ ವಿವಾಹಗಳು ನಡೆಯುವುದಿಲ್ಲವಾಗಿದೆ. ಮಹಿಳೆಗೆ ಸಮಾಜದಲ್ಲಿ ಯಾವುದೇ ರೀತಿಯ ಸ್ವಾತಂತ್ರ್ಯವನ್ನು ಒದಗಿಸಿಲ್ಲವಾಗಿ ಈ ಜನಾಂಗಗಳಲ್ಲಿ ಪುರುಷನೇ ಮುಖ್ಯವಾಗಿ ದುಡಿಯುತ್ತಿರುತ್ತಾನೆ. ಮಹಿಳೆಯರು ಅವನ ಅಧೀನತೆಯಲ್ಲಿ ಬಾಳುತ್ತಿರುವುದು ಅಧ್ಯಯನದಿಂದ ಕಂಡುಬಂದಿದೆ.

**೩.೩.೩ ಚಮ್ಮಾರಿಕೆಯ ಸಾಂಪ್ರದಾಯಿಕ ಮಹಿಳಾ ಕೌಶಲ್ಯ**



ಮಹಿಳೆಯು ಹಲವಾರು ಗುಡಿಕೈಗಾರಿಕೆಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಮುನ್ನಡೆಯುತ್ತಾ ಬಂದಿದ್ದಾಳೆ. ಇದರಲ್ಲಿ ಕೆಲವು ಗುಡಿಕೈಗಾರಿಕೆಗಳು ತಾವೇ ಮಾಡುವಂಥವುಗಳು ಇನ್ನು ಕೆಲವು ಗುಡಿಕೈಗಾರಿಕೆಗಳು ಪುರುಷನ ಅಧೀನದಲ್ಲಿ ಅವನಿಗೆ ಸಹಾಯಕಾರಿಯಾಗಿ ಕಾರ್ಯನಿರ್ವಹಣೆ ಮಾಡಿ ಸದಾಕಾಲ ಅವನ ಏಳಿಗೆಗಾಗಿ ಶ್ರಮಪಡುವುದೆ ಒಂದು ಕೆಲಸವಾಗಿ ಪರಿಣಮಿಸಿದೆ ಎಂದು ಹೇಳಬಹುದಾಗಿದೆ. ಇಲ್ಲಿ ಯಾವುದೇ ಕೂಲಿ ಸಂಬಳಗಳು ಇರುವುದಿಲ್ಲ ದಿನದಲ್ಲಿ ಹೆಚ್ಚಿನ ವೇತನವಾಗಲಿ ಕಡಿಮೆ ಅವದಿ ಮಾಡಿದರೆ ತಿಂಗಳಿಗೆ ಹೊರಗಡೆ ನೀಡುವ ಸಂಬಳವೂ ಕೂಡ ದೊರೆಯುವುದಿಲ್ಲವಾಗಿದೆ. ಕೇವಲ ಇವರು ಪುರುಷನ ಅರ್ಥಿಕ ಚಟುವಟಿಕೆಗಳನ್ನು ಮುನ್ನಡೆಸಲು ಅವನು ಮಹಿಳೆಯ ಸಹಾಯ ಪಡೆಯುತ್ತಾನೆ ಇದರಲ್ಲಿ ಮಹಿಳೆಯರು ಪುರುಷನ ಕೆಲಸಗಳಲ್ಲಿ ಸಹಾಯಕಳೇ ಹೊರತು ಅರ್ಥಿಕ ಚಟುವಟಿಕೆಗಳಲ್ಲಿ ಪಾಲುದಾರಳಲ್ಲ ಎಂಬ ಅಂಶವು ಈ ಅಧ್ಯಯನದಲ್ಲಿ ಕಂಡುಬಂದಿದೆ.

**ಪಾದರಕ್ಷೆಗಳ ಕೌಶಲ್ಯ ಕಲೆಯಲ್ಲಿ ಮಹಿಳೆ**

ಇತಿಹಾಸ ಪ್ರಸಿದ್ಧ ವಿಶ್ವಗುರು ಬಸವಣ್ಣನ ಕಾಲದಿಂದಲೂ ಈ ವೃತ್ತಿಯು ನಡೆದುಕೊಂಡು ಬಂದಿದೆ ಅಲ್ಲಿಂದಲೇ ಈ ವೃತ್ತಿಯು ನಡೆದುಕೊಂಡು ಬಂದಿದೆ ಎಂದು ಹೇಳಬಹುದಾಗಿದೆ. ಆಗಿನಿಂದಲೆ ಪುರುಷನಿಗೆ ಚಮ್ಮಾರಿಕೆ ವೃತಿಯಲ್ಲಿ ಅವನಿಗೆ ವೃತಿಯಲ್ಲಿ ಸಹಾಯಕಳಾಗಿ ಕಾರ್ಯನಿರ್ವಹಣೆ ಮಾಡುತ್ತಾ ಬಂದಿದ್ದಾಳೆ ಆಗಿನಿಂದ ಹಿಡಿದುಕೂಂಡು ಈಗಿನವರೆಗೂ ಮಹಿಳೆಯು ಚರ್ಮ ಕೈಗಾರಿಕೆಯಲ್ಲಿನ ಕೌಶಲ್ಯಕಲೆಯ ತನ್ನಪಾಲಿಗೆ ತೆಗೆದುಕೊಂಡು ನಡೆಸಿಕೊಂಡು ಬಂದಿದ್ದಾಳೆ. ಈ ಪಾದರಕ್ಷೆಗಳಲ್ಲಿ ರಬ್ಬರ್ ಚಪ್ಪಲಿಗಳು ಸಂಪೂರ್ಣ ಚರ್ಮದಿಂದ ಮಾಡಿದ ಪಾದರಕ್ಷೆಗಳು ಚರ್ಮ ಮತ್ತು ರಬ್ಬರ್‌ನಿಂದ

ತಯಾರಿಸಿದ ಚಪ್ಪಲಿಗಳು ಇನ್ನಿತರೆ ಪರ್ಸುಗಳು ವ್ಯಾನಿಟಿ ಬ್ಯಾಗ್‌ಗಳು ಇನ್ನಿತರೆ ಜನ ಬಳಕೆಯ ವಸ್ತುಗಳನ್ನು ಮಹಿಳೆಯರ ಸಹಕಾರದಿಂದಲೆ ಪುರುಷರು ತಯಾರಿಸಿಕೊಡುತ್ತಾರೆ. ಇಲ್ಲಿನ ಎಲ್ಲ ಕೌಶಲ್ಯ ಕಲೆಗಳಲ್ಲಿ ಮಹಿಳೆಯು ಪಾಲುದಾರಳಾಗಿರುತ್ತಾಳೆ ಎಂದು ಹೇಳಬಹುದಾಗಿದೆ. ಪಾದರಕ್ಷೆಗಳಲ್ಲಿ ಮಹಿಳಾ ಕೌಶಲ್ಯ ಪಾದರಕ್ಷೆಗಳಲ್ಲಿ ಮೊದಲು ಚರ್ಮವನ್ನು ನೀರಿನಲ್ಲಿ ನೆನಸಿಕೊಂಡು ಅದನ್ನು ಹದಮಾಡಿಕೊಂಡು(ಮೃದುವಾಗಿ)ಅದಕ್ಕೆ ಇಂತಿಷ್ಟು ಅಳತೆಯ ಅಚ್ಚುಗಳು ಇರುತ್ತವೆ ಈ ಅಚ್ಚುಗಳನ್ನು ಹದ ಮಾಡಿದ ಚರ್ಮದ ಮೇಲೆ ಇಟ್ಟು ಗುರುತುಗಳನ್ನು ಮಾಡಿ ಅವುಗಳನ್ನು ಕಟ್ ಮಾಡಿಕೊಂಡು ನಂತರ ಅವುಗಳಿಗೆ ಕೆಳಗಡೆ ಹಾಕುವ ಸೋಲ್(ಚರ್ಮ ಅಥವಾ ರಬ್ಬರ್)ಗಳನ್ನು ಅಳತೆಗೆ ತಕ್ಕಂತೆ ಕತ್ತರಿಸಿಕೊಳ್ಳಲಾಗುತ್ತದೆ ಅನಂತರ ಅವುಗಳಿಗೆ ಬಾರ್‌ಗಳನ್ನೆ ಮಾಡಲಾಗುತ್ತದೆ. ಇದರಲ್ಲಿ ಚರ್ಮದ ಪಾದರಕ್ಷೆಗಳಿಗೆ ಚರ್ಮದ ಹೆಣಿಕೆಯ(ಜಡೆ ಹೆಣಿಯುವುದು)ನ್ನು ಹಾಕಲಾಗುತ್ತದೆ ಈ ಹೆಣಿಕೆಯು ಮಹಿಳೆಯು ಸ್ವತಃ ಮಾಡಿಕೊಡುತ್ತಾಳೆ ಮತ್ತು ಅವುಗಳಿಗೆ ಗೊಂಡೆವುಗಳನ್ನೆ ಜೋಡಿಸಿ ಜಡೆಗಳನ್ನೆ ಪೋಣಿಸಿ ಅವುಗಳಿಗೆ ಬಂಗಾರದಂಥ ಬಣ್ಣದಿಂದ ಮಾಡಿದ ಸಿಲವಾರ್ ವಸ್ತುಗಳನ್ನೆ(ರಿಂಗ್ ರಿವೀಟ್ ಬಕಲ್ಸ)ಗಳನ್ನು ಹಾಕಿ ಅವುಗಳಿಗೆ ಅಲಂಕಾರಯುಕ್ತವಾಗಿ ಕಾಣುವಂತೆ ಅವಳು ಮಾಡುತ್ತಾಳೆ ನಂತರ ಚರ್ಮದಿಂದ ಮಾಡಿದ ಅಟ್ಟೆ ಮತ್ತು ಬಡ್ಡೆ (ಮೇಲ್ಪದರದ ಮತ್ತು ಕೆಳಪದರ)ಗಳನ್ನೆ ಜೋಡಿಸಿಕೊಂಡು ಅವುಗಳಿಗೆ ದಾರದ ಹೊಲಿಗೆಯನ್ನು ಪ್ಲಾಸ್ಟಿಕ್ ವಯರ್‌ನಿಂದ ಅವುಗಳಿಗೆ ಹೊಲಿಗೆಯನ್ನು ಹಾಕಿ ಅವುಗಳಿಗೆ ಬೇಕಾದ ಬಣ್ಣಗಳಿಂದ ಅವುಗಳಿಗೆ ಅಲಂಕಾರವನ್ನೆ ಮಾಡಿ ನಂತರ ಅದರ ಮೇಲೆ ಪಾಲಿಷ್ ಮಾಡಿ ಅವುಗಳನ್ನೆ ಮಿಂಚುವಂತೆ ಮಾಡುವ ಕೌಶಲ್ಯವು ಮಹಿಳೆಯದಾಗಿರುತ್ತದೆ. ನಂತರ ಅಟ್ಟೆ ಮತ್ತು ಬಟ್ಟೆಗಳ ತುದಿಯಲ್ಲಿನ ಹೆಚ್ಚಿನ ಭಾಗವನ್ನು ಪುರುಷನು ಕಟ್‌ಮಾಡಿ ಸಿಂಗಾರ ಮಾಡಿದ ಬಾರ್‌ಗಳನ್ನು ಬಟ್ಟೆಗಳಿಗೆ ನಾಲ್ಕು ಭಾಗದಲ್ಲಿ ಕೊರೆದು ಅವುಗಳಲ್ಲಿ ಬಾರ್‌ಗಳನ್ನೆ ಜೋಡಿಸಿಕೊಂಡು ಮೊಳೆಗಳನ್ನು ಹಾಕುವುದು ಹೊಲಿಗೆಯಿಂದ ಅವುಗಳನ್ನು ಜೋಡಿಸಿಕೊಂಡು ಪಾದರಕ್ಷೆಗಳನ್ನು ತಯಾರಾಗುತ್ತವೆ. ಇದೇ ರೀತಿಯಲ್ಲಿ ಯಾವುದೇ ಬಡ್ಡ ಮತ್ತು ಅಟ್ಟಗಳಿಗೆ ಅಂಟಿನ ಮೂಲಕ(ಸೆಲ್ಯೂಷನ್ ಫೆವಿಕಾಲ್)ನಿಂದ ಜೋಡಿಸಿಕೊಂಡು ಪಾದರಕ್ಷೆಗಳನ್ನು ಮಾಡುವುದು ಆದರೆ ಬಾರ್‌ಗಳಿಗೆ ಮಾತ್ರ ಹೊಲಿಗೆ ಯಂತ್ರದಿಂದ ಅವುಗಳಿಗೆ ಹೊಲಿಗೆಯನ್ನು ಹಾಕುವುದು, ಇಲ್ಲಿ ಬದಲಾವಣೆಯ ವಿಷಯವಾಗುತ್ತದೆ ಇಲ್ಲಿಯೂ ಕೂಡ ಯಾವುದೇ ರೀತಿಯ ಕಲರ್ ಹಾಕಲು ಬರುತ್ತದೆ ಇದರಲ್ಲಿ ಹೆಚ್ಚಿನ ಶ್ರಮದ ಕೆಲಸವಿರುವುದಿಲ್ಲ ಇಲ್ಲಿ ಎಲ್ಲ ಕೆಲಸಕ್ಕೂ ಅಂಟಿನ ಸಹಾಯವನ್ನು ಬಳಸಿಕೊಳ್ಳಲಾಗುತ್ತದೆ ಇದರಲ್ಲಿ ಮಹಿಳೆಯು ರಬ್ಬರ್ ಸೊಲನ್ನು ಕುಟ್ಟುವ ಕೆಲಸದಲ್ಲಿ ಹೆಚ್ಚಿನ ಶ್ರಮವನ್ನು ಹಾಕಬೇಕಾಗುತ್ತದೆ

ಎಂದು ಹೇಳಬಹುದಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಕೌಶಲ್ಯಕ್ಕೆ ಸಂಬಂಧ ಪಟ್ಟ ಕೆಲಸಗಳನ್ನೆ ಮಹಿಳೆಯು ಮಾಡುತ್ತಾಳೆ. ಆದರೆ ಹೆಸರು ಮಾತ್ರ ಪುರುಷನಿಗೆ ಮಾತ್ರ ಸಲ್ಲುತ್ತದೆ ಇಲ್ಲಿ ಮಹಿಳಾ ಕೌಶಲ್ಯಕ್ಕೆ ಯಾವುದೇ ಬೆಲೆಯಿಲ್ಲವೆಂದು ಇಲ್ಲಿ ತೋರುತ್ತದೆ ಎಂದು ಹೇಳಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧. ಕುಂಬಾರ ಜನಾಂಗ; ಬಸವರಾಜ ಕುಂಚೂರು
೨. ಲಂಬಾಣಿ ಸಂಸ್ಕೃತಿಕ; ಡಾ. ಪಿ.ಕೆ.ಖಂಡೋಬಾ
೩. ಕರ್ನಾಟಕದ ಲಂಬಾಣಿಗರು; ಡಾ. ಪಿ.ಕೆ.ಖಂಡೋಬಾ
೪. ಪಾದರಕ್ಷೆಗಳ ಕಲಾತ್ಮಕ ವಿನ್ಯಾಸ; ರೇವಣ್ಣ ಚಿಂತಾಮಣಿ(ಎಮ್.ವಿ.ಎ. ಕಿರುಪ್ರಬಂಧ)

## ಅಧ್ಯಾಯ : ನಾಲ್ಕು

# ಗುಡಿಕೈಗಾರಿಕೆ ಮತ್ತು ಆಧುನಿಕ ಸ್ಥಿತ್ಯಂತರಗಳು

## ಅಧ್ಯಾಯ : ನಾಲ್ಕು

# ಗುಡಿಕೈಗಾರಿಕೆ ಮತ್ತು ಆಧುನಿಕ ಸ್ಥಿತ್ಯಂತರಗಳು

**ಪ್ರಸ್ತಾವನೆ**

ಭಾರತ ದೇಶವು ಜಾತಿ ಸಂಪ್ರದಾಯಗಳಿಂದ ಕೂಡಿದ ದೇಶವಾಗಿದ್ದು, ಒಂದೊಂದು ಜಾತಿಗಳಲ್ಲಿಯೂ ಒಂದೊಂದು ವೃತ್ತಿಯಿಂದ ಕೂಡಿರುತ್ತದೆ. ಈ ವೃತ್ತಿಯಿಂದಲೇ ಅವರ ಜಾತಿಗಳನ್ನು ಅಳೆಯುವಂಥ ಒಂದು ಕಾಲವಿತ್ತು. ಆದರೆ ಈಗ ಬೇರೆ ಬೇರೆ ಜಾತಿಯವರು ಅವರಿಗೆ ಇಷ್ಟ ಬಂದ ಕೈಗಾರಿಕೆಯನ್ನು ಅವರು ಮಾಡುತ್ತಿದ್ದಾರೆ. ಈಗಿನ ಕಾಲದಲ್ಲಿ ಎಲ್ಲ ಜಾತಿಯವರು ಎಲ್ಲ ಕೆಲಸವನ್ನು ಮಾಡಬಹುದಾಗಿದೆ. ಇದರಲ್ಲಿ ಮಹಿಳೆಯರು ಗುಡಿಕೈಗಾರಿಕೆಯನ್ನು ಬಿಟ್ಟು ಆಧುನಿಕತೆ ಬೆಳಕಿನಲ್ಲಿ ತಮ್ಮ ಗುಡಿಕೈಗಾರಿಕೆಗಳನ್ನು ಮೂಲೆಗುಂಪಾಗಿಸಿರುವುದು ಕಂಡುಬರುತ್ತದೆ. ಮಹಿಳೆಯರು ಗುಡಿಕೈಗಾರಿಕೆಗಳಲ್ಲಿ ತಯಾರಿಸಿದ ವಸ್ತುಗಳಿಗಿಂತ ಆಧುನಿಕತೆಯಿಂದ ತಯಾರಿಸಿದ ಪ್ಲಾಸ್ಟಿಕ್ ವಸ್ತುಗಳು ಹೆಚ್ಚಾಗಿ ಮಾರಾಟವಾಗುತ್ತಿವೆ. ಗುಡಿಕೈಗಾರಿಕೆಗಳಲ್ಲಿ ಚರ್ಮದ ಚಪ್ಪಲಿಗಳಿಗೆ ಕಡಿಮೆ ಬೆಲೆ, ಹೆಚ್ಚಿನ ಆರೋಗ್ಯ ಕಾಪಾಡುತ್ತದೆ. ಅದೇ ರೀತಿ ಮಣ್ಣಿನಿಂದ ಮಾಡಿದ ಮಡಿಕೆ, ಕುಡಿಕೆಗಳು, ಪಗಡೆಗಳು, ಪಾದರಕ್ಷೆಗಳು ಇನ್ನಿತರೆ ವಸ್ತುಗಳಿಂದ ಮಾಡಿದ ವಸ್ತುಗಳನ್ನು ಬಳಸದೇ ಈಗ ಆಧುನಿಕತೆಯ ಯುಗದಲ್ಲಿ ಬೆಳೆದು ಬಂದಂಥ ವಸ್ತುಗಳಾದ ಪ್ಲಾಸ್ಟಿಕ್ ತಟ್ಟೆಗಳು, ಪ್ಲಾಸ್ಟಿಕ್ ಚಮಚ ಇನ್ನಿತರೆ ವಸ್ತುಗಳು ಜನ ಸಾಮಾನ್ಯರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುವುದಲ್ಲದೆ, ಇದರಿಂದ ಪರಿಸರದ ನಾಶವನ್ನು ಇಲ್ಲಿ ತಿಳಿಸಿಕೊಡಲಾಗಿದೆ.

ಈ ರೀತಿಯ ತಂತ್ರಜ್ಞಾನದಿಂದ ಗುಡಿಕೈಗಾರಿಕೆಯ ಮಹಿಳೆಯರು ಅತಂತ್ರ ಸ್ಥಿತಿಗೆ ತಳ್ಳಲ್ಪಡುತ್ತಾರೆ ಎಂದು ಹೇಳಬಹುದಾಗಿದೆ. ಇಷ್ಟು ದಿನಗಳು ಗುಡಿಕೈಗಾರಿಕೆಗಳಲ್ಲಿ ದುಡಿದು ಜೀವನ ನಡೆಸುತ್ತಿರುವ

ಮಹಿಳೆಯರು ಈಗ ಕೈಗಾರಿಕೆಗಳಲ್ಲಿನ ದುಡಿಮೆಯನ್ನು ನಂಬಿಕೊಂಡು ಬಾಳುವ ಜನರ ಸ್ಥಿತಿಯು ಚಿಂತಾಜನಕವಾಗಿರುತ್ತದೆ. ಗುಡಿ ಕೈಗಾರಿಕೆಗಳಲ್ಲಿ ಆಧುನಿಕ ಜಗತ್ತು ಕಾಲಿರಿಸಿದ ನಂತರ ಮಹಿಳೆಯರ ಜೀವನ ದುಸ್ಥರವಾಗಿದೆ. ಆಧುನಿಕ ಮಾರುಕಟ್ಟೆಯ ಪೈಪೋಟಿಯಲ್ಲಿ ಗುಡಿಕೈಗಾರಿಕೆಗಳು ಸ್ಪರ್ಧೆಗಳಿಯುವುದು ಅಸಾಧ್ಯದ ಮಾತಾಗಿದೆ. ಆಧುನಿಕ ವಸ್ತುಗಳು ಜನ ಸಾಮಾನ್ಯರ ಮನಸೂರೆಗೊಳಿಸುವ ವಸ್ತುಗಳು ಆಧುನಿಕ ವಸ್ತುಗಳಾಗಿರುತ್ತವೆ. ಗುಡಿಕೈಗಾರಿಕೆಗಳಲ್ಲಿ ಮಹಿಳೆಯ ಕೌಶಲ್ಯದಿಂದ ನಿರ್ಮಿತವಾದಂಥ ವಸ್ತುಗಳಾಗಿರುತ್ತವೆ. ತಂತ್ರಜ್ಞಾನದಲ್ಲಿ ಯಂತ್ರೋಪಕರಣಗಳಿಂದ ತಯಾರಿಸಿದ ವಸ್ತುಗಳಾಗಿರುತ್ತವೆ. ಯಂತ್ರೋಪಕರಣಳಿಂದ ಮಾಡಿದ ವಸ್ತುಗಳು ಅಲಂಕರಿತಗೊಂಡಿರುತ್ತವೆ. ಆದರೆ ಗುಡಿಕೈಗಾರಿಕೆಗಳಲ್ಲಿ ನೈಜ ಸ್ಥಿತಿಯಲ್ಲಿರುವ ವಸ್ತುಗಳಾಗಿ ಕಂಡುಬರುತ್ತವೆ. ಇದರಿಂದ ಗುಡಿಕೈಗಾರಿಕೆಗಳು ಮುಂದಿನ ದಿನಗಳಲ್ಲಿ ಆಧುನಿಕ ಕೈಗಾರಿಕೆಗಳಲ್ಲಿ ನಡೆದು ಬಂದ ದಾರಿಯನ್ನು ಈ ನನ್ನ ಅಧ್ಯಯನದಲ್ಲಿ ತಿಳಿಸಿಕೊಡಲಾಗಿದೆ.

ಗುಡಿಕೈಗಾರಿಕೆಯಲ್ಲಿ ಬಾಳುವ ಮಹಿಳೆಯರು ಆರ್ಥಿಕ ಪರಿಸ್ಥಿತಿಗಳನ್ನು ಅವಲೋಕಿಸಿದಾಗ ಅವರು ದುಡಿದ ದುಡ್ಡು ಅವರ ಮುಂದಿನ ಕೈಗಾರಿಕೆಗಳ ಬಂಡವಾಳಕ್ಕೂ ಸಾಕಾಗುವುದಿಲ್ಲವಾಗಿದೆ. ಮಹಿಳಾ ಗುಡಿಕೈಗಾರಿಕೆಗಳು ದೊಡ್ಡ ದೊಡ್ಡ ಕೈಗಾರಿಕೆಗಳ ಜೊತೆಯಲ್ಲಿ ಪೈಪೋಟಿ ಮಾಡಲಾರದೆ ಅವುಗಳ ಅವನತಿಯ ಅಂಚಿನಲ್ಲಿ ತಳ್ಳಲ್ಪಟ್ಟಿವೆ ಎಂದು ಹೇಳಬಹುದಾಗಿದೆ. ಈ ಗುಡಿಕೈಗಾರಿಕೆಗಳು ಮೊದಲು ಕಚ್ಚಾ ವಸ್ತುಗಳನ್ನು ಬಳಕೆ ಮಾಡಿ ಉತ್ಪಾದನೆಯನ್ನೇ ಮಾಡುತ್ತಿದ್ದವು. ನಂತರ ಆಧುನಿಕತೆಯ ಪ್ರಾರಂಭವಾದಾಗಿನಿಂದ ಗುಡಿಕೈಗಾರಿಕೆಗಳು ಬಳಸುತ್ತದ್ದು ಕಚ್ಚಾ ವಸ್ತುಗಳನ್ನೇ ಬಳಕೆ ಮಾಡಿ ಅತ್ಯಾಧುನಿಕ ವಸ್ತುಗಳನ್ನು ತಯಾರು ಮಾಡಿ ನಮ್ಮ ದೇಶದ ಬಡಜನರಿಗೆ ಮಧ್ಯಮ ವರ್ಗದವರಿಗೆ ಅತೀ ಕಡಿಮೆ ಬೆಲೆಗೆ ಅವುಗಳನ್ನು ಮಾರಾಟ ಮಾಡಲಾಗುತ್ತಿದೆ. ಮಾರುಕಟ್ಟೆಯಲ್ಲಿ ಅತ್ಯಾಧುನಿಕವಾದ ವಸ್ತುಗಳು ಕಡಿಮೆ ಬೆಲೆಯಲ್ಲಿ ದೊರೆಯುವಾಗ ಈ ಸಣ್ಣಪುಟ್ಟ ಗುಡಿಕೈಗಾರಿಕೆಗಳಿಂದ ಮಾಡಿದ ಕೌದಿಗಳು, ಚರ್ಮದ ವಸ್ತುಗಳು, ಮಣ್ಣಿನಿಂದ ಮಾಡಿದ ಮಡಿಕೆ, ಕುಡಿಕೆಗಳು ಕಸೂತಿ ಕಲೆಯಿಂದ ಮಾಡಿದ ಉಡುಪುಗಳು ಇನ್ನಿತರೆ ಗುಡಿ ಕೈಗಾರಿಕೆಗಳಿಂದ ಮಾಡಿದ ವಸ್ತುಗಳನ್ನು ಯಾರೂ ಕೂಡ ತೆಗೆದುಕೊಳ್ಳುವುದಿಲ್ಲವಾಗಿದೆ. ಏಕೆಂದರೆ ಆಧುನಿಕತೆ ಎಂಬ ಕತ್ತಲಲ್ಲಿ ಗುಡಿಕೈಗಾರಿಕೆಗಳು ನಲುಗಿ ಹೋಗಿವೆ. ಜನಸಾಮಾನ್ಯರು ದೊಡ್ಡ ದೊಡ್ಡ ಕಂಪನಿಗಳು ವಸ್ತುಗಳಿಗೆ ಕೊಡುವ ಪ್ರಾಶಸ್ತ್ಯವನ್ನು ಈ ಗುಡಿಕೈಗಾರಿಕೆಗಳಿಗೆ ಕೊಡುವುದಿಲ್ಲವಾಗಿದೆ.

**೪.೧ ಚರ್ಮ ಕೈಗಾರಿಕೆಗಳಲ್ಲಿನ ಆಧುನಿಕ ಸ್ವರೂಪ**

ಸುಮಾರು ಬಹಳ ಹಿಂದಿನ ಕಾಲದಿಂದಲೂ ನಡೆಸಿಕೊಂಡು ಬಂದಂಥ ಕೆಲಸಗಳೆಂದರೆ ಚರ್ಮ ಕೈಗಾರಿಕೆಯಾಗಿದೆ. ಇದರಲ್ಲಿ ಚರ್ಮದ ಪಾದರಕ್ಷೆಗಳು, ಬೆಲ್ಟ್‌ಗಳು, ಪರ್ಸ್‌ಗಳು, ವ್ಯಾನಿಟಿಬ್ಯಾಗ್‌ಗಳು

ಇನ್ನಿತರೆ ವಸ್ತುಗಳನ್ನು ಮಹಿಳೆಯರ ಸಹಾಯದಿಂದ ಪುರುಷನು ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಮೊದಲನೆಯದಾಗಿ ಚರ್ಮದ ಚಪ್ಪಲಿಗಳನ್ನು ಮಾಡುವಿಕೆಯಲ್ಲಿ ಚರ್ಮದ ಚಪ್ಪಲಿಗಳು ಕಾಲಿರಿಸಿದವು. ಈ ಚರ್ಮದ ಚಪ್ಪಲಿಗಳು ಕಾಲಿಗೆ ಮುದವನ್ನೇ ನೀಡುತ್ತವೆ. ದೇಹದ ಸ್ಥಿತಿಯನ್ನು ಸಾಮಾನ್ಯ ತಾಪಮಾನದಿಂದ ಇರಿಸಿಕೊಳ್ಳುವಂತೆ ಮಾಡುತ್ತವೆ. ಆದರೆ ಈಗ ಈ ಆಧುನಿಕತೆಯು ಕಾಲಿಟ್ಟ ನಂತರ ಪ್ಲಾಸ್ಟಿಕ್ ಪಾದರಕ್ಷೆಗಳು ಮಾರುಕಟ್ಟೆಗೆ ಲಗ್ಗೆ ಇಟ್ಟಿವೆ. ಇದರಿಂದ ಗುಡಿಕೈಗಾರಿಕೆ ಮಾಡುವ ಮಹಿಳೆಯರಿಗೆ ಸರಿಯಾದ ಕೂಲಿ ಸಿಗದೇ ನಲುಗುವಂತಾಗಿದೆ. ಚರ್ಮದ ಚಪ್ಪಲಿಗಳು ಈಗ ಕಾಡು ಕುರುಬರು ಮಾತ್ರ ಬಳಸುವಂತಾಗಿದೆ. ಪಟ್ಟಣಗಳ ಜನರು ತಂತ್ರಜ್ಞಾನದ ಪಾದರಕ್ಷೆಗಳಿಗೆ ಮಾರು ಹೋಗಿದ್ದಾರೆ ಎಂದರೆ ತಪ್ಪಾಗಲಾರದು. ಮೊದಲಿನ ಕಾಲದಲ್ಲಿ ಒಂದು ಜೊತೆ ಪಾದರಕ್ಷೆಗಳಿಗೆ ಒಂದು ಕ್ವಿಂಟಾಲ್ ಅಕ್ಕಿಯನ್ನೇ ಕೊಟ್ಟು ಅವುಗಳನ್ನೇ ಖರೀದಿ ಮಾಡುತ್ತಿದ್ದರು. ಆದರೆ ಪಾದರಕ್ಷೆಗಳ ಬೆಲೆ ಮಾತ್ರ ೨೦೦ ರೂಪಾಯಿಗಳು ಮಾತ್ರ ಇಲ್ಲಿ ತಿನ್ನುವ ಒಂದು ಕ್ವಿಂಟಾಲ್ ಅಕ್ಕಿಗೆ ನಾಲ್ಕು ಸಾವಿರ ರೂಪಾಯಿಗಳಾಗಿವೆ. ಈ ಕೈಗಾರಿಕೆಗಳನ್ನೇ ನಂಬಿ ದಿನದ ಜೀವನಕ್ಕೆ ಬೇಕಾಗುವ ಪದಾರ್ಥಗಳನ್ನು ಕೊಳ್ಳಲು ಒಂದು ಜೊತೆಗೆ ಕೇವಲ ೨೦೦ ರೂಪಾಯಿಗಳಿಂದ ಕುಟುಂಬ ನಿರ್ವಹಣೆ ಅಸಾಧ್ಯದ ಮಾತು. ಇದರಲ್ಲಿ ಎಲ್ಲ ವಸ್ತುಗಳ ಬೆಲೆ ಏರಿಕೆಯಾಗುತ್ತಿದ್ದು, ಆದರೆ ಪಾದರಕ್ಷೆಗಳ ದರಗಳು ಕಡಿಮೆಯಿರುವುದರಿಂದ ಪಾದರಕ್ಷೆಗಳನ್ನೇ ಮಾಡುವ ಚಮ್ಮಾರರ ಬದುಕು ದುಸ್ಥರವಾಗಿದೆ ಎಂದು ಹೇಳಬಹುದಾಗಿದೆ.

ಈಗಿನ ಆಧುನಿಕ ಜಗತ್ತಿನಲ್ಲಿ ನೋಡಿದರೆ ಪ್ಲಾಸ್ಟಿಕ್ ವಸ್ತುಗಳೇ ಹೆಚ್ಚಾಗಿ ನಾವು ಬಳಕೆಗೆ ಬಳಸುತ್ತೇವೆ ಎಂದು ತಿಳಿದು ನೋಡಬೇಕಾಗಿದೆ. ಇದರಲ್ಲಿ ಪ್ಲಾಸ್ಟಿಕ್ ಜನ ಸಾಮಾನ್ಯರ ಆರೋಗ್ಯ ಹದಗೆಡಿಸುತ್ತದೆ. ಮತ್ತು ಇದರಿಂದ ಅನೇಕ ಗುಡಿಕೈಗಾರಿಕೆಗಳು ಬೀದಿ ಪಾಲಾಗುವ ಸ್ಥಿತಿಗಳು ಕಂಡುಬರುತ್ತವೆ ಎಂದು ತಿಳಿದು ನೋಡುವುದು ಮುಖ್ಯವಾಗಿದೆ.

ಗುಡಿಕೈಗಾರಿಕೆಗಳಿಗೆ ಮಾರುಕಟ್ಟೆಯಲ್ಲಿ ದೊರೆಯುವ ಬೆಲೆಯೇ ಮೂಲ ಬೆಲೆಯಾಗಿರುತ್ತದೆ ಅದರಲ್ಲಿಯೂ ಆಧುನಿಕ ವಸ್ತುಗಳು ಪೈಪೋಟಿಗಿಳಿದರೆ ಆ ಮೂಲ ಬೆಲೆಯೂ ಇಲ್ಲದಂತಾಗಿ ಉಪವಾಸ ವನವಾಸ ಮಾಡಬೇಕಾದ ಪರಿಸ್ಥಿತಿಗಳು ಕಂಡುಬರುತ್ತವೆ ಎಂದು ತಿಳಿದು ನೋಡಬೇಕಾಗಿದೆ. ಇಲ್ಲಿ ಗುಡಿಕೈಗಾರಿಕೆಗಳಿಗೆ ಸರ್ಕಾರಿ ಸೌಲತ್ತುಗಳು ದೊರೆಯುತ್ತಿಲ್ಲ. ಪ್ರೋತ್ಸಾಹವಿಲ್ಲ ಅವುಗಳಿಗಾಗಿ ಇನ್ನಷ್ಟು ತರಬೇತಿ ನೀಡುವುದು ಬಿಟ್ಟು ಅವುಗಳ ಅವನತಿಯನ್ನು ಕಂಡುಕೊಳ್ಳುವ ದೊಡ್ಡ ಕೈಗಾರಿಕೆಗಳಿಗೆ ಪರವಾನಗಿ ಕೊಡುವುದೇ ಮುಖ್ಯವಾದ ಕೆಲಸವಾಗಿ ನಡೆದುಕೊಂಡು ಬಂದಿದೆ ಎಂದು ಹೇಳಬಹುದಾಗಿದೆ.

ಆಧುನಿಕತೆಯ ಹೆಸರಿನಲ್ಲಿ ದೊಡ್ಡ ದೊಡ್ಡ ಬಂಡವಾಳಶಾಹಿಗಳು ಬಹಳ ದೊಡ್ಡಮಟ್ಟದಲ್ಲಿ ಬಂಡವಾಳವನ್ನು ಹೂಡಿಕೊಂಡು ಹೊಸ ಹೊಸ ವಿನ್ಯಾಸಗಳ ಹಲವು ಮಾದರಿಗಳ ಪಾದರಕ್ಷೆಗಳು, ಪರ್ಸ್‌ಗಳು ಬೆಲ್ಟ್‌ಗಳು, ಶೂಗಳು, ಶ್ಯಾಂಡಲ್‌ಗಳು, ಜರ್ಕಿನ್‌ಗಳು, ಹ್ಯಾಂಡ್ ಗ್ಲೌಜ್‌ಗಳು ಇನ್ನಿತರೆ ವಸ್ತುಗಳನ್ನು ತಯಾರಿಸುವ ರಾಷ್ಟ್ರೀಯ ಅಂತರ್‌ರಾಷ್ಟ್ರೀಯ ಕಂಪನಿಗಳಾದ ಬಾಟಾ, ರೀಬಾಕ್, ಲಿಬರ್‌ಟೀ, ನೈಕ್, ಫಾಸ್ಟ್‌ಟ್ರ್ಯಾಕ್, ಪಾಪುಲರ್ ಇನ್ನಿತರೆ ಹಲವಾರು ಖಾಸಗಿ ಕಂಪನಿಗಳು ತಯಾರಿಸಿದ ಪಾದರಕ್ಷೆಗಳು ಚರ್ಮದ ವಸ್ತುಗಳು ಭಾರೀ ದುಬಾರಿ ದರದಲ್ಲಿ ಮಾರಾಟವಾಗುತ್ತಿವೆ. ಆದರೆ ಇದರ ತದ್ವಿರುದ್ದವಾಗಿ ಗುಡಿಕೈಗಾರಿಕೆಗಳು ಅನೇಕ ಸವಾಲುಗಳನ್ನು ಎದುರಿಸುತ್ತಿವೆ. ಆ ಖಾಸಗಿ ಕಂಪನಿಗಳು ಎಷ್ಟು ದೊಡ್ಡ ಮಟ್ಟದಲ್ಲಿ ಲಾಭವನ್ನು ಪಡೆಯುತ್ತಿವೆಯೋ ಅಷ್ಟೇ ಸಣ್ಣ ಪ್ರಮಾಣದ ಲಾಭವನ್ನು ಗುಡಿಕೈಗಾರಿಕೆಗಳು ಪಡೆಯುತ್ತಿವೆ. ಒಂದು ವೇಳೆ ಲಾಭ ಬಾರದಿದ್ದರೆ ತೊಡಗಿಸಿಕೊಂಡ ಬಂಡವಾಳಕ್ಕೆ ಆ ವಸ್ತುವಿನ ಬೆಲೆಯು ಸಮವಾಗಿರುತ್ತದೆ. ಇಲ್ಲಿ ಗುಡಿ ಕೈಗಾರಿಕೆಗಳಿಗಿಂತ ಹೆಚ್ಚಾಗಿ ಆಧುನಿಕ ಕೈಗಾರಿಕೆಗಳ ದುಡಿಮೆ ಲಾಭಗಳು, ಬಂಡವಾಳಗಳು ಹೆಚ್ಚಾಗಿರುತ್ತವೆ. ಆದರೆ ಗುಡಿಕೈಗಾರಿಕೆಗಳಲ್ಲಿ ಹೆಚ್ಚು ಬಂಡವಾಳ ಹೆಚ್ಚು ಶ್ರಮ, ಲಾಭವು ಕಡಿಮೆಯಾಗಿರುತ್ತವೆ.

ಆಧುನೀಕರಣದಿಂದ ಚರ್ಮಕಾರರು ಪುರುಷರು / ಮಹಿಳೆಯರು ಇವರುಗಳು ದುಡಿದ ಕೂಲಿಯು ಅವರ ಒಪ್ಪೊತ್ತಿನ ಊಟಕ್ಕೂ ಸಾಕಾಗುವುದಿಲ್ಲವಾಗಿದೆ. ಮುಖ್ಯವಾಗಿ ಮಹಿಳೆಯರು ಅವರ ಶ್ರಮವನ್ನು ವ್ಯಯಿಸಿ ಮಾಡಿದ ವಸ್ತುಗಳಿಗೆ ಸರಿಯಾದ ಬೆಲೆ ಸಿಗದೆ ಅತಂತ್ರ ಸ್ಥಿತಿಯಲ್ಲಿ ಅವರು ಜೀವನ ನಡೆಸುವಂಥ ಸ್ಥಿತಿಯು ತಲೆದೋರಿದೆ ಎಂದು ಹೇಳಬಹುದಾಗಿದೆ.

**೪.೨ ಕುಂಬಾರಿಕೆಯಲ್ಲಿ ಆಧುನಿಕ ತಂತ್ರಜ್ಞಾನ**

ಪುರಾತನ ಕಾಲದಿಂದಲೂ ಮನುಷ್ಯನು ಮಡಿಕೆ ಕುಡಿಕೆಗಳಿಂದ ಜೀವನವನ್ನು ನಡೆಸುತ್ತಾ ಜೀವನವನ್ನು ತಿಳಿದುಕೊಂಡು ಮುಂದೆ ವಂಶಾವಳಿಗಳು ಬೆಳೆದಂತೆ ಒಂದು ಉಪಯುಕದ ವಸ್ತುಗಳು ಬದಲಾವಣೆ ಹೊಂದುತ್ತಾ ಹೋಗುತ್ತವೆ. ಅದೇ ರೀತಿಯಲ್ಲಿ ಕುಂಬಾರಿಕೆಯಲ್ಲಿನ ವಸ್ತುಗಳು ದಿನಗಳು, ವರ್ಷಗಳು ಕಳೆದಂತೆ ಬದಲಾವಣೆ ಹೊಂದುತ್ತಾ ನಂತರ ಪಿಂಗಾಣಿ ವಸ್ತುಗಳಾಗಿ ಮಾರ್ಪಾಡಾದವು. ಇನ್ನೂ ಆಧುನಿಕತೆ ಬಂದರೆ ಈಗಿನ ಪಾತ್ರೆಗಳು ಈ ಆಧುನಿಕತೆಗೆ ಉದಾಹರಣೆಯಾಗಿವೆ. ಮನುಷ್ಯನ ಅವಶ್ಯಕತೆಗಳಿಗೆ ತಕ್ಕಂತೆ ಮನುಷ್ಯ ತಾನೂ ಬದಲಾಗಿ ಅವರ ದಿನ ಬಳಕೆಯ ವಸ್ತುಗಳು ಕೂಡ ಬದಲಾಗುತ್ತಿವೆ ಎನ್ನುವುದಕ್ಕೆ ಆಧುನಿಕತೆಯೇ ಸಾಕ್ಷಿಯಾಗಿದೆ.

ಕುಂಬಾರಿಕೆ ಕಲೆಯಲ್ಲಿ ಮಡಿಕೆ ಕುಡಿಕೆಗಳು ಮಾಡುವುದು, ಗಣಪತಿ ಇನ್ನಿತರೆ ವಿಗ್ರಹಗಳನ್ನು ಮಾಡುವುದು ಹಂಚುಗಳನ್ನು ತಯಾರಿಸುವುದು ಒಟ್ಟಿನಲ್ಲಿ ಮಣ್ಣಿನಿಂದ ಮಾಡಿದಂಥ ವಸ್ತುಗಳೆಲ್ಲವನ್ನೂ ಕುಂಬಾರಿಕೆಯ ಪಟ್ಟಿಯಲ್ಲಿ ಸೇರಿಸಬಹುದಾಗಿದೆ. ನಮ್ಮ ದೇಶದಲ್ಲಿ ಎಲ್ಲ ಗುಡಿಕೈಗಾರಿಕೆಗಳು ಆಧುನಿಕತೆಯತ್ತ ಸಾಗುತ್ತಿವೆ. ಆದರೆ ಕುಂಬಾರಿಕೆಯು ಮಾತ್ರ ಮಂದಗತಿಯಲ್ಲಿ ಆಧುನಿಕತೆಯ ಕಡೆಗೆ ನಡೆದುಕೊಂಡು ಹೋಗುತ್ತಿದೆ. ನಮ್ಮ ದೇಶದ ಹಲವಾರು ಹಳ್ಳಿಗಳಲ್ಲಿ ನೋಡಿದಾಗ ಹಲವಾರು ವರ್ಷಗಳ ಹಿಂದೆ ಬಳಸುತ್ತಿದ್ದ ಭಾರವಾದ ತಿಗುರಿ ಇನ್ನೂ ಕೂಡ ಬಳಕೆಯಲ್ಲಿವೆ. ಕುಂಬ ಕಲೆಯಲ್ಲಿ ಆಧುನಿಕತೆಯು ತಲುಪಿ ನೂರಾರು ವರ್ಷಗಳಿಂದಲೂ ಅವುಗಳು ಬಡ ಕುಂಬಾರರ ಮನೆ ತಲುಪುವಲ್ಲಿ ವಿಫಲವಾಗಿವೆ.

**೪.೩ ಕೌದಿ ಹೆಣಿಕೆಯ ಆಧುನಿಕ ತಂತ್ರಜ್ಞಾನ**

ಈ ವೃತ್ತಿಯು ಬಹಳ ಹಿಂದಿನ ಕಾಲದಿಂದಲೂ ನಡೆದು ಬಂದಂಥ ಒಂದು ಕಲೆಯಾಗಿದೆ. ಈ ಕೌದಿ ಬಳಕೆಯು ಮುಖ್ಯವಾಗಿ ಮಧ್ಯಮ ವರ್ಗದವರು ಬಳಸುತ್ತಾರೆ ಏಕೆಂದರೆ ಇದರಲ್ಲಿ ಕೌದಿ ಹೊಲೆಯುವ ಕೂಲಿಯೊಂದನ್ನು ಬಿಟ್ಟು ಉಳಿದೆಲ್ಲ ವಸ್ತುಗಳು ಹಳೆಯ ಬಟ್ಟೆಗಳನ್ನು ತುಂಡರಿಸಿ ಅವುಗಳನ್ನು ಜೋಡಿಸಿ ನಂತರ ಮೇಲ್ಪದರ ಅವುಗಳಿಗೆ ಅಲಂಕಾರಿಕ ಬಟ್ಟೆಗಳನ್ನು ಹಾಕಿ ಅವುಗಳನ್ನು ಅಲಂಕರಿಸುತ್ತಾರೆ. ಮೊದಮೊದಲು ಈ ಕೌದಿಗಳನ್ನು ಸೂಜಿ ಮತ್ತು ದಾರದಿಂದ ಜೋಡಿಸಿಕೊಂಡು ಹೆಣಿಯುತ್ತಿದ್ದರು. ಆದರೆ ಈಗ ಬಟ್ಟೆ ಹೊಲೆಯುವ ಮಿಷನ್‌ಗಳಿಂದ ಕೌದಿಗಳನ್ನು ಹೊಲೆಯುತ್ತಾರೆ. ಬಟ್ಟೆಹೊಲೆಯುವ ಯಂತ್ರಗಳನ್ನು ಕೊಳ್ಳಲು ಆಗದವರು ಕೈಯಿಂದಲೇ ಹೆಣೆಯುತ್ತಾರೆ. ಬಟ್ಟೆಹೊಲೆಯುವ ಯಂತ್ರವನ್ನು ಕೊಳ್ಳಲು ಆರ್ಥಿಕ ಸ್ಥಿತಿ ಸರಿಯಾಗಿದ್ದವರು ಯಂತ್ರವನ್ನು ಖರೀದಿಸಿ ಅದರಿಂದ ಕೌದಿಯನ್ನು ಹೊಲೆಯುತ್ತಾರೆ.

ಆಧುನಿಕತೆಯು ಬಂದ ನಂತರ ಕೌದಿಯ ಬಳಕೆಯು ಕಡಿಮೆಯಾಗಿದ್ದು, ಬಡವರು ಮತ್ತು ಮಧ್ಯಮ ವರ್ಗದವರು ಮಾತ್ರ ಬಳಸುತ್ತಿದ್ದು ಅದರಲ್ಲೂ ಬಹಳ ಕಡಿಮೆ ಬೆಲೆಯಲ್ಲಿ ಜಮಖಾನ, ಹಾಸಿಗೆಗಳು, ಅತ್ಯಾಧುನಿಕವಾದ ಗಾದೆಗಳು ಇನ್ನಿತರೆ ತಂತ್ರಜ್ಞಾನದ ವಸ್ತುಗಳು ಮಾರುಕಟ್ಟೆಗೆ ಲಗ್ಗೆ ಇಟ್ಟಿವೆ. ಈ ತಂತ್ರಜ್ಞಾನದ ವಸ್ತುಗಳು ಅತ್ಯಾಧುನಿಕ ಕಂಪನಿಗಳಾದ ಕುರ್ಲ್‌ಆನ್, ಕೋಆಪ್‌ಡಿಕ್ಸ್, ಇನ್ನಿತರೆ ಕಂಪನಿಗಳು ತಯಾರಿಸಿದ ಹಾಸಿಗೆಗಳು, ಗಾದೆಗಳು ಇನ್ನಿತರೆ ವಸ್ತುಗಳ ಮುಂದೆ ಈ ಕೌದಿ ಕಲೆಯು ನಶಿಸುತ್ತಿದೆ.

ಈ ರೀತಿಯ ದೊಡ್ಡ ದೊಡ್ಡ ಕೈಗಾರಿಕೆಗಳಿಂದ ತಯಾರಿಸಿದ ವಸ್ತುಗಳ ಜೊತೆಯಲ್ಲಿ ಕೌದಿ ಕಲೆಯು ಪೈಪೋಟಿಗೆ ನಿಲ್ಲುವುದು ಅಸಾಧ್ಯದ ಮಾತಾಗಿದೆ. ಕೌದಿ ಕಲೆಯು ಹಳ್ಳಿಗಳಲ್ಲಿ ಮಾತ್ರ

ಇಂದು ನೆಲೆನಿಂತಿದೆ. ಏಕೆಂದರೆ ಅವರಿಗೆ ಈ ಕೌದಿಯ ಬಳಕೆಯನ್ನು ಬಿಟ್ಟರೆ ಬೇರೆ ಏನೂ ಗೊತ್ತಿರುವುದಿಲ್ಲ. ಅಲ್ಲಿ ಆಧುನಿಕವಾಗಿ ತಯಾರಾದ ಹಾಸಿಗೆಗಳು ಗಾದೆಗಳು ಇನ್ನಿತರೆ ವಸ್ತುಗಳ ಬಳಕೆಯು ತಿಳಿದಿರುವುದಿಲ್ಲ ಅದಕ್ಕಾಗಿ ಅವರು ಕೌದಿಯನ್ನು ಬಳಕೆ ಮಾಡುತ್ತಿರುತ್ತಾರೆ.

ಕೌದಿ ಕಲೆಯು ಪಟ್ಟಣಗಳಲ್ಲಿ ಅದರ ಬೆಲೆಯನ್ನು ಕಳೆದುಕೊಂಡರೆ ಹಳ್ಳಿಗಾಡಿನಲ್ಲಿ ಕೌದಿಗೆ ಒಳ್ಳೆಯ ಬೆಲೆಗೆ ಅವುಗಳನ್ನು ಹೆಣೆದುಕೊಡುತ್ತಾರೆ. ಕೌದಿಗಳು ತುಂಬಾ ಪ್ರಾಮುಖ್ಯತೆಯನ್ನು ಪಡೆದಿರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಕೌದಿ ಕಲೆಯು ಅವನತಿಯ ಅಂಚಿನಲ್ಲಿದೆ.

**ಅಡಿ ಟಿಪ್ಪಣಿಗಳು**

೧. ಕುಂಬಾರ ಜನಾಂಗ; ಬಸವರಾಜ ಕುಂಚೂರು
೨. ಲಂಬಾಣಿ ಸಂಸ್ಕೃತಿಕ; ಡಾ. ಪಿ.ಕೆ.ಖಂಡೋಬಾ
೩. ಪಾದರಕ್ಷೆಗಳ ಕಲಾತ್ಮಕ ವಿನ್ಯಾಸ; ರೇವಣ್ಣ ಚಿಂತಾಮಣಿ(ಎಮ್.ಎ.ಎ. ಕಿರುಪ್ರಬಂಧ)

# ಅಧ್ಯಾಯ ಐದು

# ಸಮಾರೋಪ

೫.೧ ಅಧ್ಯಾಯಗಳ ಸಮೀಕ್ಷೆ

೫.೨ ಅಧ್ಯಯನದ ಫಲಿತಗಳು

೫.೩ ಮುಂದಿನ ಅಧ್ಯಯನ ಸಾಧ್ಯತೆಗಳು

# ಅಧ್ಯಾಯ: ಐದು

# ಸಮಾರೋಪ

ಮಹಿಳೆಯು ಗುಡಿಕೈಗಾರಿಕೆಗಳ ಅವರ ಪಾತ್ರವನ್ನು ಅರಿಯಲು ಪೂರ್ವಸಿದ್ಧತೆಗಳಾಗಿ ಪುಸ್ತಕಗಳನ್ನು ಪ್ರಬಂಧಗಳನ್ನು ಪರಿಶೀಲಿಸುವುದು ಸಂಶೋಧನಾ ಪ್ರಬಂಧಗಳನ್ನು ಪರಿಶೀಲಿಸುವುದು ಅಗತ್ಯವಿದೆ ಎಂದು ಪ್ರಬಂಧಗಳನ್ನು ಅಭ್ಯಾಸಿಸಲಾಗಿದೆ. ಅವು ಅಧ್ಯಯನಕ್ಕೆ ಪೂರಕವಾಗಿವೆಯೋ ಇಲ್ಲವೋ ಎಂದು ಇಲ್ಲಿ ಪರಿಗಣಿಸಲಾಗಿದೆ ಅಧ್ಯಯನಕ್ಕೆ ಒಳಪಡಿಸಿದ ಸಂಶೋಧನಾ ಗ್ರಂಥಗಳು ಲೇಖನಗಳು, ಪುಸ್ತಕಗಳನ್ನು ಈ ಕೆಳಗೆ ಮುಂದಿನ ಪುಟಗಳಲ್ಲಿ ನೋಡಬಹುದಾಗಿದೆ.

ಮಹಿಳೆಯನ್ನು ಕೇವಲ ಒಬ್ಬ ಕೂಲಿ ಕಾರ್ಮಿಕಳಾಗಿ ನೋಡದೆ ಒಂದು ವಸ್ತುವಿನ ತಯಾರಿಕೆಯಲ್ಲಿ ಕುಶಲತೆಯನ್ನು ತೋರ್ಪಡಿಸುವ ಕೌಶಲ್ಯಭಂಡಾರ ಎಂದು ಕರೆಯಬಹುದಾಗಿದೆ. ಇಲ್ಲಿ ಮಹಿಳೆಯ ಕೌಶಲ್ಯಕ್ಕೆ ಮರುಜೀವವನ್ನು ತುಂಬಲಾಗಿದೆ ಎಂದು ಹೇಳಬಹುದಾಗಿದೆ.

ಗುಡಿ ಕೈಗಾರಿಕೆಗಳಲ್ಲಿ ಮಹಿಳಾ ಬದುಕು ಎಂಬ ಸಂಶೋಧನಾ ವಿಷಯವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ನೋಡಿದಾಗ ಮಹಿಳೆಯು ತನ್ನ ಕೌಶಲ್ಯದ ಜೊತೆಗೆ ತನ್ನ ಎಲ್ಲ ರಂಗಗಳಲ್ಲಿ(ಸಾಮಾಜಿಕ, ಆರ್ಥಿಕ, ರಾಜಕೀಯ ರಂಗಗಳಲ್ಲಿ) ಮಹಿಳೆಯು ಕುಸಿಯುತ್ತಿದ್ದಾಳೆ ಎಂದು ಹೇಳಬಹುದಾಗಿದೆ. ಇಲ್ಲಿ ಗುಡಿಕೈಗಾರಿಕೆಗಳು ಕೌಶಲ್ಯಕ್ಕೆ ಬೆಲೆ ದೊರೆತರೆ ಅವಳು ಆರ್ಥಿಕವಾಗಿ ಸಬಲತೆಯನ್ನು ಹೊಂದುತ್ತಾಳೆ. ಇದರಿಂದ ಅವಳ ಸಾಮಾಜಿಕ ಬದುಕು ಕೂಡ ಮೇಲ್ದರ್ಜೆಗೆ ಏರುತ್ತದೆ. ಮುಂದೆ ಇವಳು ರಾಜಕೀಯ ಜೀವನಕ್ಕೂ ಕಾಲಿಡಬಹುದಾಗಿದೆ. ಇವರಲ್ಲಿ ಮಹಿಳೆಯರ ಎಲ್ಲ ರಂಗಗಳಲ್ಲಿ ಮುಂದುವರೆಯಲು ಮಹಿಳೆಯರ ಸಬಲತೆಯ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಗಿದೆ ಎಂದು ಹೇಳಬಹುದು.

### ೫.೧ ಅಧ್ಯಾಯಗಳ ಸಮೀಕ್ಷೆ

ಮೊದಲನೇ ಅಧ್ಯಾಯದಲ್ಲಿ ಗುಡಿಕೈಗಾರಿಕೆಗಳಲ್ಲಿನ ಲಿಂಗ ತಾರತಮ್ಯಗಳನ್ನು ಅರಿಯಲು ಅಧ್ಯಯನ ಸಹಾಯವಾಗಿದೆ. ಗುಡಿಕೈಗಾರಿಕೆಗಳಲ್ಲಿನ ಮಹಿಳೆಯರ ಸಮುದಾಯದ ಉತ್ಪಾದನೆದೊಂದಿಗೆ ಅವರ ಜೀವನ ಕ್ರಮ ಕುಟುಂಬ ವ್ಯವಸ್ಥೆ ಅಲ್ಲಿನ ಆರ್ಥಿಕ ಸಾಮಾಜಿಕ ಸಮಸ್ಯೆಗಳನ್ನೇ ಪರಿಹಾರಗಳನ್ನು ಕಂಡುಕೊಳ್ಳುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಯನ್ನು ಇದರಲ್ಲಿ ಅಳವಡಿಸಿಕೊಳ್ಳಲಾಗಿದೆ. ಮಹಿಳೆಯರ ಕೌಶಲ್ಯದ ಹಿಂದಿನ ಒಂದು ಬದುಕನ್ನು ತೆರೆದಿಡುವ ಪ್ರಯತ್ನಗಳನ್ನ ಮೊದಲನೇ ಅಧ್ಯಾಯದಲ್ಲಿ ಮಾಡಲಾಗಿದೆ.

ಎರಡನೇ ಅಧ್ಯಾಯದಲ್ಲಿ ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು ಈ ಸಂಶೋಧನೆಯಲ್ಲಿ ಮುಖ್ಯವಾದ ಅಧ್ಯಾಯವಾಗಿದೆ. ಇಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಅಧ್ಯಯನದ ಚೌಕಟ್ಟು ಮತ್ತು ವಿಷಯದ ಸ್ಪಷ್ಟೀಕರಣ ಮಾಡಲಾಗಿದೆ. ಆಯ್ದುಕೊಂಡ ಮತ್ತು ಗುಡಿಕೈಗಾರಿಕೆಗಳು ಸಂಕ್ಷಿಪ್ತ ವಿವರಣೆ ಇಲ್ಲಿ ಕೊಡಲಾಗಿದೆ. ಈ ಗುಡಿಕೈಗಾರಿಕೆಗಳಲ್ಲಿ ಮಹಿಳೆಯರ ಪಾತ್ರವನ್ನು ಇಲ್ಲಿ ತಿಳಿಸಿಕೊಡಲಾಗಿದೆ. ಅವರು ಕೌಶಲ್ಯಕ್ಕೆ ಯಾವ ರೀತಿಯ ಪ್ರಾಶಸ್ತ್ಯವನ್ನು ನೀಡುತ್ತಿದ್ದಾರೆ ಎಂದು ಇಲ್ಲಿ ನೋಡಬಹುದಾಗಿದೆ.

ಮೂರನೇ ಅಧ್ಯಾಯದಲ್ಲಿ ಗುಡಿಕೈಗಾರಿಕೆಯಲ್ಲಿ ತೊಡಗಿಕೊಂಡಿರುವ ಮಹಿಳೆಯರು ಆರ್ಥಿಕ ಪರಿಸ್ಥಿತಿಗಳಲ್ಲಿ ಅಂದರೆ ವೇತನದಲ್ಲಿ ತಾರತಮ್ಯ ಮನೆಯಲ್ಲಿ ಪುರುಷ ಪ್ರಾಬಲ್ಯಗಳು ಯಾವ ರೀತಿಯಾಗಿ ಮಹಿಳೆಯನ್ನು ನಿಯಂತ್ರಿಸುತ್ತವೆ ಎಂದು ಇಲ್ಲಿ ನೋಡಬಹುದಾಗಿದೆ.

ಸಾಮಾಜಿಕ ಸ್ಥಿತಿಗತಿಗಳಲ್ಲಿ ಮಹಿಳೆಯು ಯಾವ ರೀತಿಯಾಗಿ ಕುಟುಂಬದ ಪರಿಸರದಲ್ಲಿ ಅವಳು ಕೌಶಲ್ಯದ ಕಡೆಗೆ ಕಾರ್ಯನಿರ್ವಹಣೆ ಮಾಡುತ್ತಾಳೆ ಮತ್ತು ಅವಳಿಗೆ ಇರುವ ಸಾಮಾಜಿಕ ಅವಕಾಶಗಳು ಹೇಗಿರುತ್ತವೆ ಎಂದು ತಿಳಿದುಕೊಳ್ಳಬಹುದಾಗಿದೆ.

ಸಾಂಪ್ರದಾಯಿಕ ಕೌಶಲ್ಯದಲ್ಲಿ ಮಹಿಳೆಯು ಒಂದು ನಿಯಂತ್ರಿತ ಪುರುಷ ಸಮಾಜದಲ್ಲಿ ತನ್ನ ಕೌಶಲ್ಯಕ್ಕೆ ಯಾವ ರೀತಿಯ ಒಂದು ಸಮಯವನ್ನು ಇಲ್ಲಿ ಕೊಟ್ಟಿದ್ದಾಳೆ ಎಂದು ನೋಡಬಹುದಾಗಿದೆ. ತನ್ನ ಕೌಶಲ್ಯ ಕಲೆಯಿಂದ ನಿರುಪಯುಕ್ತ ವಸ್ತುಗಳನ್ನು ಸೇರಿಸಿಕೊಂಡು ಬಹು ಉಪಯುಕ್ತ ವಸ್ತುವನ್ನಾಗಿ ಮಾಡುವುದು ಒಂದು ರೀತಿಯ ಕೌಶಲ್ಯವಾಗಿದೆ. ಕೌಶಲ್ಯವು ಮಧ್ಯಮ ವರ್ಗದವರ ಪಾಲಿಗೆ ತುಂಬಾ ಅವಶ್ಯಕ ವಸ್ತುವಾಗಿ ಪರಿಣಮಿಸಿದೆ ಎಂದು ಹೇಳಬಹುದಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಗುಡಕೈಗಾರಿಕೆಗಳಲ್ಲಿ ಆಧುನಿಕ ಸ್ಥಿತ್ಯಂತರಗಳಲ್ಲಿ ಧರ್ಮ ಕೈಗಾರಿಕೆಯಲ್ಲಿ ಆಧುನಿಕತೆಯು ಯಾವ ರೀತಿಯಾಗಿ ಪ್ಲಾಸ್ಟಿಕ್ ಪಾದರಕ್ಷೆ ಬೆಂಡ್, ಟೈರ್ ಸೋಲ್ ಇನ್ನಿತರೆ ವಸ್ತುಗಳಿಂದ ತಯಾರಿಸಿದ ವಸ್ತುಗಳು ಕಡಿಮೆ ಬೆಲೆಗೆ ದೊರೆತರೂ ಅವುಗಳ ಜನಸಾಮಾನ್ಯರಿಗೆ ಅನಾರೋಗ್ಯಕ್ಕೆ ಎಡೆಮಾಡಿಕೊಡುತ್ತವೆ ಆದರೆ ಗುಡಿಕೈಗಾರಿಕೆಗಳಿಂದ ಮಾಡಿದ ಪಾದರಕ್ಷೆಗಳಾದರೆ ಪಾದಗಳನ್ನೇ ತಂಪಾಗಿಡುತ್ತದೆ.

ಕುಂಬಾರಿಕೆಯಲ್ಲಿನ ಆಧುನಿಕ ತಂತ್ರಜ್ಞಾನದಲ್ಲಿ ಮೊದಲಿನ ಮಣ್ಣಿನ ಮಡಿಕೆ ಕುಡಿಕೆಗಳು ಮಾಯವಾಗಿ ಈಗಿನ ವಸ್ತುಗಳಾದ ಪಿಂಗಾಣಿ, ಸ್ಟೀಲ್ ಪಾತ್ರೆಗಳು, ಅಲ್ಯೂಮಿನಿಯಂ ಪಾತ್ರೆಗಳು ಇನ್ನಿತರೆ ಪಾತ್ರೆಗಳನ್ನು ಆಧುನಿಕತೆಯಿಂದ ತಯಾರಿಸುತ್ತಾರೆ. ಇದರಲ್ಲಿ ಉತ್ತಮವಾದ ಕೌಶಲ್ಯವನ್ನು ಒಟ್ಟು ಜನರು ಆಧುನಿಕತೆಗೆ ಯಾವ ರೀತಿಯಾಗಿ ಮಾರ್ಪಾಡಾಗಿದ್ದಾರೆ ಎಂಬುದರ ಕುರಿತು ಈ ಅಧ್ಯಯನದಲ್ಲಿ ಪ್ರಸ್ತುತಪಡಿಸಲಾಗಿದೆ.

ಕೌದಿ ಎಣಿಕೆಯು ಈಗ ಮದ್ಯಮ ವರ್ಗದವರಿಂದಲೇ ನಡೆಯುತ್ತಿದೆ. ಇದರಲ್ಲಿ ಈ ವರ್ಗದವರು ಹೆಚ್ಚಾಗಿ ಕೌದಿಯನ್ನು ಬಳಸುತ್ತಾರೆ. ಕೌದಿಯನ್ನೇ ಶ್ರೀಮಂತರು ಬಳಸುವುದಿಲ್ಲವಾಗಿದೆ. ಮತ್ತು ಆಧುನಿಕವಾಗಿ ಬಂದಿರುವ ಜಮಖಾನ, ಚಾದಾರ, ಬೆಡ್‌ಗಳು, ಬೆಡ್‌ಶೀಟ್‌ಗಳು ಇನ್ನಿತರೆ ವಸ್ತುಗಳು ಬಂದರೂ ಕೂಡ ಊರೂರು ಕಟ್ಟಿಗೆ ಬಂದು ಕೌದಿಯು ತನ್ನದೇ ಆದ ಕೌಶಲ್ಯ ಕಲೆಯನ್ನು ಜನ ಸಾಮಾನ್ಯರ ಮನಸ್ಸಿನಲ್ಲಿ ನಿಲ್ಲುವಂತೆ ಮಾಡಿದೆ ಎಂದು ಹೇಳಬಹುದಾಗಿದೆ.

ಕೊನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಸಂಬಂಧಪಟ್ಟ ಮಾಹಿತಿದಾರರ ಪಟ್ಟಿಯನ್ನ ಮಾಡಿದ್ದೇನೆ. ಪ್ರಶ್ನಾವಳಿಯನ್ನು ಮಾಡಿದ್ದೇನೆ. ಗ್ರಂಥಋಣ, ಛಾಯಾಚಿತ್ರ ಇನ್ನಿತರೆ ವಿಷಯಗಳನ್ನ ಅಧ್ಯಯನದಲ್ಲಿ ಅಳವಡಿಸಿಕೊಂಡಿದ್ದೇನೆ

**೫.೨ ಅಧ್ಯಯನದ ಫಲಿತಗಳು**

೧. ಮಹಿಳೆಗೆ ಸಾಮಾಜಿಕ ಸಂಪ್ರದಾಯಗಳ ಎಲ್ಲಾ ಕಾರ್ಯಕ್ರಮಗಳು ಪುರುಷ ಪ್ರಧಾನ ನೆಲೆಯಲ್ಲಿಯೇ ನಡೆಯುತ್ತವೆ.

೨. ಸಂಪ್ರದಾಯ ಎಂಬ ಕಟ್ಟಳೆಗೆ ಮಹಿಳೆಯನ್ನು ಕಟ್ಟಿ ಹಾಕಿ ಆಕೆಯನ್ನು ಎರಡನೇ ದರ್ಜೆಗೆ ತಳ್ಳಲಾಗಿದೆ.

೩. ಇಲ್ಲಿ ಮಹಿಳೆ ಪುರುಷನ ಅಧೀನಳಾಗಿ ಉಳಿದಿದ್ದಾಳೆ ಇಲ್ಲಿ ಸ್ತ್ರೀ ಪುರುಷರ ನಡುವೆ ಸಮಾನತೆಯ ಅವಶ್ಯಕತೆ ಇದೆ.

೪. ಮಹಿಳೆಯನ್ನು ಪುರುಷರು ಹಿಡಿತದಲ್ಲಿಟ್ಟುಕೊಂಡು ಆಕೆಯ ಕೌಶಲ್ಯದ ಮೇಲೆ ಹಿಡಿತವನ್ನು ಸಾಧಿಸಿದ್ದಾರೆ ಇಲ್ಲಿ ಮಹಿಳೆಗೆ ದುಡಿಮೆಯ ಸ್ವಾತಂತ್ರ್ಯದ ಅವಶ್ಯಕತೆ ಇದೆ .

೫. ಆರ್ಥಿಕ, ರಾಜಕೀಯ, ಶೈಕ್ಷಣಿಕ ಹಾಗೂ ಆರೋಗ್ಯದ ವಿಷಯದಲ್ಲಿಯೂ ಮಹಿಳೆಯರು ಹಿಂದುಳಿದಿದ್ದಾರೆ ಎನ್ನಬಹುದು. ಮಹಿಳೆಯರಿಗೆ ಸಬಲೀಕರಣದ ಬಗ್ಗೆ ತರಬೇತಿಗಳ ಅವಶ್ಯಕತೆ ಇದೆ.

೬. ಅನಕ್ಷರಸ್ಥರೇ ಹೆಚ್ಚಾಗಿರುವುದರಿಂದ ಸರ್ಕಾರದ ಯಾವುದೇ ಸೌಲಭ್ಯಗಳನ್ನು ಪಡೆದುಕೊಂಡಿಲ್ಲ ಎಂದು ಹೇಳಬಹುದು. ಇ ವರಿಗೆ ವ್ಯವಹಾರದ ತರಬೇತಿಗಳನ್ನು ನೀಡಬೇಕು

೭. ಇವರ ಕೌಶಲ್ಯಕ್ಕೆ ಯಾವುದೇ ಹಣಕಾಸು ಸಂಸ್ಥೆಯಿಂದ ಆರ್ಥಿಕ ನೆರವು ದೊರೆಯುವಂತೆ ಸರಕಾರ ದಂದ ಸಿಫಾರಸ್ಸು ಮಾಡಬೇಕು

**೫.೩ ಮುಂದಿನ ಸಲಹೆ ಸಾಧ್ಯತೆಗಳು**

ಗುಡಿ ಕೈಗಾರಿಕೆ ಮಾಡುವಂತಹ ಮಹಿಳೆಯರಿಗೆ ಸರ್ಕಾರದ ಎಲ್ಲಾ ಯೋಜನೆಗಳು ಸಿಗುವಂತೆ ಮಾಡಬೇಕು.

೧. ಈ ಕೈಗಾರಿಕೆಗಳಲ್ಲಿ ತೊಡಗಿರುವಂತಹ ಅವಿದ್ಯಾವಂತ ಮಹಿಳೆಯರಿಗೆ ವಯಸ್ಕರ ಶಿಕ್ಷಣ ಸಮಿತಿಗಳಂತಹ ತರಬೇತಿ ಕೇಂದ್ರಗಳಲ್ಲಿ ಇವರಿಗೆ ಹಲವಾರು ಗುಡಿಕೈಗಾರಿಕೆಗಳ ಬಗ್ಗೆ ತರಬೇತಿ ನೀಡಬೇಕು.

೨. ಮೇಲು ಕೀಳು ಎಂಬ ಭಾವನೆ ಇಲ್ಲದೇ ಎಲ್ಲಾ ಕ್ಷೇತ್ರದಲ್ಲೂ ಪುರುಷರಿಗೆ ಸರಿಸಮಾನವಾದ ಸ್ಥಾನಮಾನಗಳನ್ನು ಮಹಿಳೆಯರಿಗೂ ಕಲ್ಪಿಸಿಕೊಡಬೇಕು.

೩. ಪ್ರತಿಯೊಂದು ಊರಿನಲ್ಲಿಯೂ ಕೈಗಾರಿಕಾ ತರಬೇತಿ ಕೇಂದ್ರವನ್ನು ತೆರೆಯಬೇಕು.

೪. ಕೈಗಾರಿಕಾ ಕೇಂದ್ರಗಳಲ್ಲಿ ಆ ಊರಿನ ಸಮುದಾಯದಲ್ಲಿ ಕಂಡುಬರುವ ಗುಡಿ ಕೈಗಾರಿಕೆಗಳನ್ನು ಗುರುತಿಸಿ ಈ ಕೈಗಾರಿಕೆಗಳಲ್ಲಿ ಇನ್ನೂ ಹೆಚ್ಚಿನ ಅಭಿವೃದ್ಧಿ ಮತ್ತು ತಂತ್ರಜ್ಞಾನವನ್ನು

ಅಳವಡಿಸಿಕೊಳ್ಳಲು ಮಹಿಳೆಯರಿಗೆ ತರಬೇತಿ ನೀಡಬೇಕು.

೫. ಸಮುದಾಯದಲ್ಲಿ ಕಂಡುಬರುವ ಕಾರ್ಯನಿರತ ಸ್ವಸಹಾಯ ಸಂಘಗಳನ್ನು ಆಯ್ಕೆ ಮಾಡಿಕೊಂಡು ಅವುಗಳಿಗೆ ಅವರ ಕೌಶಲ್ಯಕ್ಕೆ ತಕ್ಕಂತೆ ಅವರಿಗೆ ತರಬೇತಿ ಮತ್ತು ಸಾಲಮೇಳಗಳನ್ನು ಬ್ಯಾಂಕ್‌ವತಿಯಿಂದ ಹಮ್ಮಿಕೊಳ್ಳಬೇಕು.

೬. ಸ್ತ್ರೀ-ಪುರುಷರಿಬ್ಬರಿಗೂ ಸರಿಸಮಾನ ಶೈಕ್ಷಣಿಕವಾಗಿ ಆರ್ಥಿಕವಾಗಿ, ಧಾರ್ಮಿಕವಾಗಿ, ಆರೋಗ್ಯದಲ್ಲೂ ತಾರತಮ್ಯ ಮಾಡದೆ ಸಮಾನತೆಯನ್ನು ಕಲ್ಪಿಸಿಕೊಡಬೇಕು.

೭. ಮಹಿಳೆಯರಿಗೆ ದೊರೆಯುವಂತಹ ರಾಜಕೀಯ, ಶೈಕ್ಷಣಿಕ ಮೀಸಲಾತಿಗಳನ್ನು ಹಾಗೂ ಉದ್ಯೋಗ ಕೈಗೊಳ್ಳುವಲ್ಲಿನ ಮೀಸಲಾತಿಗಳನ್ನು ಸರಿಯಾಗಿ ತಿಳಿಯಪಡಿಸಿ ಅದರ ಲಾಭ ಪಡೆದು ಸಮಾಜದ ಮುಖ್ಯವಾಹಿನಿಗೆ ಮಹಿಳೆಯರು ಬರುವಂತೆ ಮಾಡಬೇಕು.

ಮಹಿಳೆಯರ ಮೇಲೆ ಪುರುಷರ ಎಲ್ಲಾ ನಿಯಂತ್ರಣಗಳು ಸಡಿಲಗೊಳ್ಳಬೇಕು. ಮತ್ತು ಅವರು ಎಲ್ಲಾ ರಂಗಗಳಲ್ಲಿ ಬೆಳೆಯಲು ಪುರುಷರು ಅವರ ಏಳಿಗೆಗಾಗಿ ಶ್ರಮಿಸಬೇಕು.

# ಅನುಬಂಧಗಳು

## ೧. ಕೋಷ್ಟಕಗಳಲ್ಲಿ ಮಾಹಿತಿದಾರರ ಪಟ್ಟಿ

ಗುಡಿಕೈಗಾರಿಕೆಗಳಲ್ಲಿ ತೊಡಗಿಕೊಂಡ ಮಹಿಳೆಯರ ವೈಯಕ್ತಿಕ ವಿವರಗಳ ಪಟ್ಟಿ.

| ಕ್ರ ಸಂ. | ಮಹಿಳೆಯರ ಹೆಸರು | ವಯಸ್ಸು | ಊರು | ಜಾತಿ / ಉಪಜಾತಿ | ವೈವಾಹಿಕ ಸ್ಥಾನಮಾನ | ಶಿಕ್ಷಣ ಮಟ್ಟ |
|---|---|---|---|---|---|---|
| ೧ | ಬಸಮ್ಮ | ೫೫ | ಕಂಪ್ಲಿ | ಮುಚಿಗೇರು | ವಿವಾಹಿತೆ | ಅನಕ್ಷರಸ್ಥೆ |
| ೨ | ಸುಜಾತ | ೨೧ | –॥– | –॥– | –॥– | –॥– |
| ೩ | ಮಾರೆವ್ವ | ೬೦ | –॥– | –॥– | –॥– | –॥– |
| ೪ | ಅನ್ನಪೂರ್ಣ | ೨೫ | –॥– | –॥– | –॥– | ೫ನೇ ತರಗತಿ |
| ೫ | ಪಾರ್ವತಿ | ೩೦ | –॥– | –॥– | –॥– | ಅನಕ್ಷರಸ್ಥೆ |
| ೬ | ಮಾರೆವ್ವ | ೩೦ | –॥– | –॥– | –॥– | –॥– |
| ೭ | ಮರೆವ್ವ | ೭೦ | –॥– | –॥– | –॥– | –॥– |
| ೮ | ಲಕ್ಷ್ಮಿದೇವಿ | ೬೦ | –॥– | –॥– | –॥– | –॥– |
| ೯ | ವಾಣಿ | ೨೬ | –॥– | –॥– | –॥– | ೫ನೇ ತರಗತಿ |
| ೧೦ | ಶಕುಂತಲ | ೩೦ | –॥– | –॥– | –॥– | ಅನಕ್ಷರಸ್ಥೆ |
| ೧೧ | ನೀಲವ್ವ | ೫೦ | –॥– | –॥– | –॥– | –॥– |
| ೧೨ | ಕಮಲಮ್ಮ | ೨೫ | –॥– | –॥– | –॥– | –॥– |
| ೧೩ | ಶೇಶವ್ವ | ೫೦ | –॥– | –॥– | –॥– | –॥– |
| ೧೪ | ರೇಣುಕವ್ವ | ೩೦ | –॥– | –॥– | –॥– | –॥– |
| ೧೫ | ಹುಲಿಗೆಮ್ಮ | ೬೦ | –॥– | –॥– | –॥– | –॥– |
| ೧೬ | ಯಮುನವ್ವ | ೩೦ | –॥– | –॥– | ಅವಿವಾಹಿತೆ | ೩ನೇ ತರಗತಿ |

| ಕ್ರ ಸಂ. | ಮಹಿಳೆಯರ ಹೆಸರು | ವಯಸ್ಸು | ಊರು | ಜಾತಿ / ಉಪಜಾತಿ | ವೈವಾಹಿಕ ಸ್ಥಾನಮಾನ | ವೃತ್ತಿ | ಶಿಕ್ಷಣ ಮಟ್ಟ |
|---|---|---|---|---|---|---|---|
| ೧೭ | ರೇಣುಕಮ್ಮ | ೫೫ | ಕಂಪ್ಲಿ | ಚಮ್ಮಾರರು | ವಿವಾಹಿತೆ | ಚಮ್ಮಾರಿಕೆ | ೭ನೇ ತರಗತಿ |
| ೧೮ | ಜಯಲಕ್ಷ್ಮಿ | ೩೨ | –॥– | –॥– | –॥– | –॥– | ಪಿ.ಯು.ಸಿ. |
| ೧೯ | ಹುಲಿಗೆಮ್ಮ | ೨೪ | –॥– | –॥– | –॥– | –॥– | ಬಿ.ಎ. |
| ೨೦ | ಶಕುಂತಲ | ೩೫ | –॥– | –॥– | –॥– | –॥– | ಎಸ್.ಎಸ್.ಎಲ್.ಸಿ. |
| ೨೧ | ಮೀನಾಕ್ಷಿ | ೨೮ | –॥– | –॥– | –॥– | –॥– | –॥– |
| ೨೨ | ಭೀಮಮ್ಮ | ೩೫ | –॥– | –॥– | –॥– | –॥– | ೮ನೇ ತರಗತಿ |
| ೨೩ | ಗಂಗಮ್ಮ | ೬೦ | –॥– | –॥– | –॥– | –॥– | ಬಿ.ಎ. |
| ೨೪ | ನಿರ್ಮಲ | ೩೫ | –॥– | –॥– | –॥– | –॥– | ೮ನೇ ತರಗತಿ |
| ೨೫ | ಸರಸ್ವತಿ | ೩೩ | –॥– | –॥– | –॥– | –॥– | ಎಸ್.ಎಸ್.ಎಲ್.ಸಿ. |
| ೨೬ | ಸುಲೋಚನ | ೩೫ | ಗಂಗಾವತಿ | –॥– | –॥– | –॥– | ಅನಕ್ಷರಸ್ಥೆ |
| ೨೭ | ಬಾಳಮ್ಮ | ೫೨ | –॥– | –॥– | –॥– | –॥– | –॥– |
| ೨೮ | ಶಶಿಕಲ | ೨೩ | –॥– | –॥– | –॥– | –॥– | ಎಸ್.ಎಸ್.ಎಲ್.ಸಿ. |
| ೨೯ | ಶಾಂತಮ್ಮ | ೫೬ | –॥– | –॥– | –॥– | –॥– | –॥– |
| ೩೦ | ಗೌರಮ್ಮ | ೫೫ | –॥– | –॥– | –॥– | –॥– | ೮ನೇ ತರಗತಿ |
| ೩೧ | ಲಲಿತಮ್ಮ | ೩೧ | –॥– | –॥– | –॥– | –॥– | –॥– |
| ೩೨ | ಯಲ್ಲಮ್ಮ | ೭೦ | ಗಂಗಾವತಿ | –॥– | –॥– | –॥– | –॥– |
| ೩೩ | ಕಾಳಮ್ಮ | ೬೫ | –॥– | –॥– | –॥– | –॥– | –॥– |
| ೩೪ | ಕಣಿಮಿ | ೧೬ | ಕಂಪ್ಲಿ | –॥– | ಅವಿವಾಹಿತೆ | –॥– | ೫ನೇ ತರಗತಿ |
| ೩೫ | ಲಕ್ಷ್ಮಿ | ೨೦ | –॥– | –॥– | –॥– | –॥– | ೯ನೇ ತರಗತಿ |
| ೩೬ | ತಾಯಮ್ಮ | ೪೦ | ಹೊಸಪೇಟೆ | –॥– | –॥– | –॥– | ೩ನೇ ತರಗತಿ |

| ಕ್ರ ಸಂ. | ಮಹಿಳೆಯರ ಹೆಸರು | ವಯಸ್ಸು | ಊರು | ಜಾತಿ / ಉಪಜಾತಿ | ವೈವಾಹಿಕ ಸ್ಥಾನಮಾನ | ಶಿಕ್ಷಣ ಮಟ್ಟ |
|---|---|---|---|---|---|---|
| ೩೭ | ಭಾಗ್ಯಮ್ಮ | ೪೦ | ಕಂಪ್ಲಿ | ಕುಂಬಾರಿಕೆ | ವಿವಾಹಿತೆ | ೫ನೇ ತರಗತಿ |
| ೩೮ | ಸಾವಿತ್ರಿ | ೩೫ | –॥– | –॥– | –॥– | ೭ನೇ ತರಗತಿ |
| ೩೯ | ಬಸಮ್ಮ | ೩೩ | –॥– | –॥– | –॥– | ೩ನೇ ತರಗತಿ |
| ೪೦ | ನೀಲಮ್ಮ | ೩೦ | –॥– | –॥– | –॥– | ಎಸ್.ಎಸ್.ಎಲ್.ಸಿ |
| ೪೧ | ಗೌರಮ್ಮ | ೪೫ | –॥– | –॥– | –॥– | ಪಿ.ಯು.ಸಿ. |
| ೪೨ | ಲಲಿತಮ್ಮ | ೩೩ | –॥– | –॥– | ಅವಿವಾಹತೆ | ಎಸ್.ಎಸ್.ಎಲ್.ಸಿ |
| ೪೩ | ಕಾವೇರಿ | ೨೦ | –॥– | –॥– | ವಿವಾಹಿತೆ | ಬಿ.ಎ. |
| ೪೪ | ಸುಮಲತಾ | ೨೫ | –॥– | –॥– | –॥– | –॥– |
| ೪೫ | ಪಾರ್ವತಮ್ಮ | ೫೦ | ಗಂಗಾವತಿ | –॥– | –॥– | ೭ನೇ ತರಗತಿ |
| ೪೬ | ಜಾನಕಮ್ಮ | ೫೫ | ಕಂಪ್ಲಿ | –॥– | –॥– | ೨ನೇ ತರಗತಿ |
| ೪೭ | ಶಿವಮ್ಮ | ೬೦ | ಹೊಸಪೇಟೆ | –॥– | –॥– | ೭ನೇ ತರಗತಿ |
| ೪೮ | ಈರಮ್ಮ | ೬೫ | –॥– | –॥– | –॥– | ೮ನೇ ತರಗತಿ |
| ೪೯ | ದೇವಿರಮ್ಮ | ೭೦ | –॥– | –॥– | –॥– | ೪ನೇ ತರಗತಿ |
| ೫೦ | ಸರಸ್ವತಿ | ೩೧ | ಕಂಪ್ಲಿ | –॥– | –॥– | ಎಸ್.ಎಸ್.ಎಲ್.ಸಿ |
| ೫೧ | ಲಕ್ಷ್ಮಿ | ೨೧ | ಗಂಗಾವತಿ | –॥– | ಅವಿವಾಹಿತೆ | ೯ನೇ ತರಗತಿ |

## ೨. ಪ್ರಶ್ನಾವಳಿ ಮಾದರಿ

## ಗುಡಿಕೈಗಾರಿಕೆಗಳಲ್ಲಿ ಮಹಿಳಾ ಬದುಕು

### (ಹೊಸಪೇಟೆ ಮತ್ತು ಗಂಗಾವತಿ ತಾಲ್ಲೂಕುಗಳಲ್ಲಿನ ಗುಡಿಕೈಗಾರಿಕೆಯಲ್ಲಿ ನಿರತರಾದ ಮಹಿಳೆಯರನ್ನು ಅನುಲಕ್ಷಿಸಿ)

ಹೆಸರು :

ವಯಸ್ಸು :

ಜಾತಿ :

ಉಪಜಾತಿ :

ವೈವಾಹಿಕ ಸ್ಥಾನಮಾನ : ಅ. ವಿವಾಹಿತೆ ಬ. ಅವಿವಾಹಿತೆ

ಕ. ವಿಧವೆ ಡ. ವಿಚ್ಛೇದಿತೆ

ಶಿಕ್ಷಣ ಮಟ್ಟ : ಅ. ಪ್ರಾಥಮಿಕ ಬ. ಮಾಧ್ಯಮಿಕ

ಕ. ಕಾಲೇಜು ಡ. ಅನಕ್ಷರಸ್ಥೆ

ಸಾಮಾಜಿಕ ಸ್ಥಾನಮಾನ

೧. ಹೆಣ್ಣುಮಕ್ಕಳ ವಿವಾಹದ ನಿರ್ಧಾರ ಯಾರು ತೆಗೆದುಕೊಳ್ಳುತ್ತಾರೆ?

ಅ. ತಂದೆ-ತಾಯಿ ಬ. ಅಣ್ಣಂದಿರು

ಕ. ಸ್ವತಃ ನಾವೆ ತೆಗೆದುಕೊಳ್ಳುತ್ತೇವೆ ಡ. ಸಂಬಂಧಿಕರು

೨. ನಿಮ್ಮ ವಿವಾಹ ಎಷ್ಟನೇ ವಯಸ್ಸಿನಲ್ಲಿ ಆಯಿತು?

ಅ. ೧-೫ ಬ. ೫-೧೦

ಕ. ೧೦-೧೫ ಡ. ೧೫-೨೦

೩. ವೈವಾಹಿಕ ಸಂಬಂಧ ಬೆಸೆಯುವಾಗ ಕೊಡುಕೊಳ್ಳುವಿಕೆಯ ಬಗೆಗಳು ಯಾವುದರಲ್ಲಿ ಜರುಗುತ್ತವೆ.

ಅ. ಸಾತಪಾಡಿ

ಬ. ಮಾನಪಾಡಿ

ಕ. ಕಾವಾಡಿ

ಡ. ಬೇರೆ ಜಾತಿಯವರೊಂದಿಗೆ

೪. ಮದುವೆಯ ಸಂದರ್ಭದಲ್ಲಿನ ಸಂಬಂಧದ ಸ್ವರೂಪವನ್ನು ಯಾವ ಬಗೆಯಲ್ಲಿ ನಿರ್ಧರಿಸಲಾಗುತ್ತದೆ.

ಅ. ವರನ ಕಡೆಯಿಂದ ವಧುವಿಗೆ ಹಣ ನೀಡುವ ಮೂಲಕ

ಬ. ವಧುವಿನ ಕಡೆಯಿಂದ ವರನಿಗೆ ಹಣ ನೀಡುವ ಮೂಲಕ

ಕ. ಭಾವನಾತ್ಮಕ ಸಂಬಂಧಗಳ ಆಧಾರದ ಮೇಲೆ

೫. ಯಾವ ಸಂದರ್ಭದಲ್ಲಿ ಹೆಣ್ಣಿಗೆ ಮರುಮದುವೆಯಾಗಲು ಅವಕಾಶವಿದೆ.

ಅ. ಗಂಡ ಸತ್ತ ನಂತರ

ಬ. ವಿಚ್ಛೇದಿತೆಯಾದಾಗ

ಕ. ಗಂಡ ಪರಿತ್ಯಜನೆ ಮಾಡಿದಾಗ

ಡ. ಯಾವಾಗಲೂ ಇಲ್ಲ

೬. ಇತರೆ ಮಹಿಳೆಯರಿಗಿಂತ ಬೇರೆ ಆಗಿದ್ದೀರಿ ಎಂದು ಗುರುತಿಸಿಕೊಳ್ಳಲು ಕಾರಣವೇನು?

ಅ. ಸಂಪ್ರದಾಯ

ಬ. ಗಂಡಸರ ದಬ್ಬಾಳಿಕೆ

ಕ. ಕೈಗೊಳ್ಳುವ ದುಡಿಮೆಯ ಬಗೆ

ಡ. ಜಾತೀಯತೆ

೭. ನಿಮ್ಮ ಮನೆಯಲ್ಲಿ ಯಾವ ವಿಷಯಕ್ಕೆ ಸಂಬಂಧಿಸಿದಂತೆ ನಿರ್ಧಾರಗಳನ್ನು ಕೈಗೊಳ್ಳುತ್ತೀರಿ?

ಅ. ಮಕ್ಕಳ ಮದುವೆಯ ವಿಚಾರದಲ್ಲಿ

ಬ. ಮಕ್ಕಳಿಗೆ ಶಿಕ್ಷಣ ಕೊಡಿಸುವ ಸಂದರ್ಭದಲ್ಲಿ

ಕ. ದುಡಿಮೆ ಕೈಗೊಳ್ಳುವ ವಿಚಾರದಲ್ಲಿ

ಡ. ಆಸ್ತಿ ಖರೀದಿಸುವ ವಿಷಯದಲ್ಲಿ

೮. ಕುಟುಂಬದಲ್ಲಿ ನಿಮಗೆ ಯಾವ ವಿಚಾರಗಳಲ್ಲಿ ಸೌಲಭ್ಯಗಳನ್ನು ನೀಡಿದ್ದಾರೆ?

ಅ. ಶಿಕ್ಷಣ ಹೊಂದುವಲ್ಲಿ

ಬ. ಆರೋಗ್ಯ ತಪಾಸಣಾ ವಿಚಾರದಲ್ಲಿ

ಕ. ದುಡಿದ ಹಣವನ್ನು ಸ್ವಇಚ್ಛೆಯಿಂದ ಖರ್ಚುಮಾಡುವಲ್ಲಿ

ಡ. ಯಾವುದು ಇಲ್ಲ

೯. ದುಡಿಯಲು ಯಾವ ಯಾವ ಊರುಗಳಿಗೆ ಹೋಗುತ್ತೀರಿ? ಹೋದರೆ ಅದರ ಸ್ವರೂಪ ಎಂತದ್ದು? ಸಮಸ್ಯೆಗಳೇನು?

೧೦. ಯಾವ ಸಂದರ್ಭದಲ್ಲಿ ದೌರ್ಜನ್ಯಕ್ಕೆ ಒಳಗಾಗುತ್ತೀರಿ? ಮತ್ತು ಅದರ ಸ್ವರೂಪವೆಂತದ್ದು?

ಅ. ದುಡಿಯಲು ಹೋದ ಸಂದರ್ಭದಲ್ಲಿ

ಬ. ಗಂಡ ಹೆಂಡಿರ ನಡುವೆ ಜಗಳವಾದಂತಹ ಸಂದರ್ಭದಲ್ಲಿ

ಕ. ಗಂಡ ಕುಡಿದು ಬಂದಂತ ಸಂದರ್ಭದಲ್ಲಿ

ಡ. ಯಾವಾಗಲೂ ಇಲ್ಲ

ಅದರ ಸ್ವರೂಪ :

೧೧. ನಿಮ್ಮ ಕೆಳಮಟ್ಟದ ಜೀವನ ನಿರ್ವಹಣೆಗೆ ಕಾರಣವೇನು?

ಅ. ಬಡತನ ಬ. ಜಾತಿಯತೆ

ಕ. ಪುರುಷ ಪ್ರಧಾನತೆ ಡ. ಶಿಕ್ಷಣ ಹೊಂದದೆ ಇರುವುದು

೧೨. ಬೇರೆ ಯಾವ ಜಾತಿಗೆ ಮತಾಂತರ ಹೊಂದಲು ಅವಕಾಶವಿದೆ?

ಅ. ಇಸ್ಲಾಂ ಧರ್ಮ ಬ. ಕ್ರೈಸ್ತ ಧರ್ಮ

ಕ. ಜೈನ ಧರ್ಮ ಅಥವಾ ಬೌದ್ಧ ಧರ್ಮ ಡ. ಯಾವುದು ಇಲ್ಲ

**ಆರ್ಥಿಕ ಸ್ಥಿತಿಗತಿ**

೧೩. ಯಾವ ಬಗೆಯ ಕೆಲಸಗಳಲ್ಲಿ ತೊಡಗಿಕೊಂಡಿದ್ದೀರಿ

೧೪. ನಿಮ್ಮ ದುಡಿಮೆಯ ಸ್ವರೂಪ ಯಾವ ತರಹದ್ದು?

ಅ. ಸಾಂಪ್ರದಾಯಿಕವಾದದ್ದು ಬ. ಆಧುನಿಕವಾದದ್ದು

೧೫. ಯಾವ ಋತುಮಾನ ನಿಮ್ಮ ಕೆಲಸಕ್ಕೆ ಸೂಕ್ತವಾಗಿದೆ.?

ಅ. ಮಳೆಗಾಲ ಬ. ಚಳಿಗಾಲ

ಕ. ಬೇಸಿಗೆ ಕಾಲ ಡ. ಎಲ್ಲಾ ಋತುಮಾನಗಳು

೧೬. ದಿನಕ್ಕೆ ಎಷ್ಟು ಗಂಟೆಗಳ ಕಾಲ ದುಡಿಯುತ್ತೀರಿ?

ಅ. ೧–೩ ಬ. ೩–೬

ಕ. ೬–೯ ಡ. ೯–೧೨

೧೭. ಕೆಲಸಕ್ಕೆ ಹೋದ ಸಂದರ್ಭದಲ್ಲಿ ಯಾವ ಬಗೆಯ ದೌರ್ಜನ್ಯಕ್ಕೆ ಒಳಗಾಗುತ್ತೀರಿ?

ಅ. ಲೈಂಗಿಕ ಕಿರುಕುಳ ಬ. ಮಾನಭಂಗ

ಕ. ಅಶ್ಲೀಲ ಮಾತುಗಳಿಂದ ಸಂಭೋದಿಸುವುದು ಡ. ಯಾವುದೂ ಇಲ್ಲ

೧೮. ನಿಮ್ಮ ಮನೆಯಲ್ಲಿ ಯಾರು ಯಾರು ಕೆಲಸ ಮಾಡುತ್ತೀರಿ?

ಅ. ನಾನು ಬ. ಗಂಡ

ಕ. ಅತ್ತೆ ಮತ್ತು ಮಕ್ಕಳು ಡ. ಮಾವ

೧೯. ನಿಮ್ಮ ದುಡಿಮೆಯಿಂದ ಬಂದ ಹಣವನ್ನು ಏನು ಮಾಡುತ್ತೀರಿ?

ಅ. ಬ್ಯಾಂಕ್‌ನಲ್ಲಿ ಇಡುತ್ತೇವೆ.

ಬ. ಮನೆ ಬಳಕೆಗೆ ಖರ್ಚು ಮಾಡುತ್ತೇವೆ.

೨೦. ದುಡಿದು ಬಂದ ಹಣವನ್ನು ಯಾರ ಕೈಗೆ ಕೊಡುತ್ತೀರಿ?

ಅ. ಪತಿಯ ಕೈಯಲ್ಲಿ

ಬ. ತಂದೆ ತಾಯಿಗಳ ಕೈಯಲ್ಲಿ

ಕ. ಅತ್ತೆ ಮಾವಂದಿರ ಕೈಯಲ್ಲಿ

ಡ. ಸ್ವತಃ ನಾನೇ ಖರ್ಚು ಮಾಡುತ್ತೇನೆ.

೨೧. ಯಾವ ಬಗೆಯ ಮಹಿಳಾ ಗುಂಪುಗಳನ್ನು ರಚಿಸಿಕೊಂಡ ಅನುಭವವಿದೆ?

ಅ. ಸ್ವಸಹಾಯ ಗುಂಪುಗಳು

ಬ. ಸ್ತ್ರೀಶಕ್ತಿ ಗುಂಪುಗಳು

ಕ. ಮಹಿಳಾ ಸಂಘಗಳು

ಡ. ಯಾವುದೂ ಇಲ್ಲ

೨೨. ಗುಂಪುಗಳು ಈಗಲೂ ಚಾಲ್ತಿಯಲ್ಲಿ ಇವೆಯೇ?

ಅ. ಹೌದು ಬ. ಇಲ್ಲ

೨೩. ಸರ್ಕಾರದ ಯಾವುದಾದರೂ ಯೋಜನೆಯ ಲಾಭ ಪಡೆದಿದ್ದೀರಾ?

ಅ. ಹೌದು ಬ. ಇಲ್ಲ

೨೪. ಯಾವ ಬಗೆಯ ಆಸ್ತಿಯನ್ನು ಹೊಂದಿದ್ದೀರಿ?

ಅ. ಮನೆ ಬ. ಹೊಲ

ಕ. ಚರ ಆಸ್ತಿಗಳು ಡ. ಯಾವುದೂ ಇಲ್ಲ

**ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆಗಳು**

೨೫. ಎಂತಹ ಸಂದರ್ಭದಲ್ಲಿ ಸೂತಕಗಳ ಆಚರಣೆ ಮಾಡುತ್ತೀರಿ?

ಅ. ಋತುಮತಿಯಾದಾಗ

ಬ. ತಿಂಗಳ ಮುಟ್ಟಿನ ಸಂದರ್ಭದಲ್ಲಿ

ಕ. ಜನನ ಮತ್ತು ಮರಣದ ಸಂದರ್ಭದಲ್ಲಿ

ಡ. ಯಾವಾಲೂ ಮಾಡುವುದಿಲ್ಲ

೨೬. ಯಾವ ಬಗೆಯ ದೇವರುಗಳ ಪೂಜೆಯನ್ನು ಸಮುದಾಯದಲ್ಲಿ ಕೈಗೊಳ್ಳುತ್ತೀರಿ? ಮತ್ತು ಏಕೆ?

೨೭. ಮಹಿಳೆಯರಿಗೆಂದೇ ಇರುವ ಪ್ರತ್ಯೇಕವಾದ ಯಾವ ಹಬ್ಬ ಹರಿದಿನಗಳನ್ನು ಆಚರಿಸುತ್ತೀರಿ?

೨೮. ಸಾಮಾನ್ಯವಾಗಿ ನಿಮ್ಮಲ್ಲಿ ಸ್ವಚ್ಛತೆ ಕಡಿಮೆ ಎಂದು ಹೇಳುತ್ತಾರೆ. ಇದು ಸತ್ಯವೇ? ಹೌದು ಎಂದಾದರೆ ಮಲೀನತೆಯಿಂದ ಯಾವ ಬಗೆಯಲ್ಲಿ ಆರೋಗ್ಯದ ತೊಂದರೆಗಳು ಉಂಟಾಗುತ್ತವೆ.?

೨೯. ನಿಮ್ಮ ಹೆರಿಗೆ ಎಲ್ಲಿ ಮಾಡಿಸುತ್ತಾರೆ.

ಅ. ಸರ್ಕಾರಿ ಆಸ್ಪತ್ರೆಯಲ್ಲಿ

ಬ. ಖಾಸಗಿ ಆಸ್ಪತ್ರೆಯಲ್ಲಿ

ಕ. ಮನೆಯಲ್ಲಿ

೩೦. ದುಡಿಯಲು ಬೇರೆ ಬೇರೆ ಪ್ರದೇಶಗಳಿಗೆ ಹೋದಾಗ ಯಾವ ಬಗೆಯ ತೊಂದರೆಗಳು ಉಂಟಾಗುತ್ತವೆ.?

## ೩. ಗ್ರಂಥಋಣ


೧. ಕುಂಬಾರ ಜನಾಂಗ, ಬಸವರಾಜ ಕುಂಚೂರು

೨. ಸ್ತ್ರೀವಾದ, ಡಾ. ಎಚ್.ಎಸ್.ಶ್ರೀಮತಿ

೩. ಮಹಿಳಾ ಅಧ್ಯಯನಗಳು, ಒಡೆಯರ್ ಡಿ. ಹೆಗ್ಗಡೆ

೪. ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ಎನ್. ಅನ್ನಪೂರ್ಣೇಶ್ವರಿ

೫. ಲಂಬಾಣಿ ಸಂಸ್ಕೃತಿ, ಡಾ. ಪಿ.ಕೆ. ಖಂಡೋಬ

೬. ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಸಾರಾ ಅಬೂಬಕ್ಕರ್

೭. ಮಹಿಳಾ ಆರ್ಥಿಕತೆ, ಡಾ. ಎಚ್.ಎಸ್.ಶ್ರೀಮತಿ, ಡಾ. ಶಿವಾನಂದ ಎಸ್. ವಿರಕ್ತಮಠ, ಡಾ. ಜೆ.ಕೃಷ್ಣ

೮. ಮಹಿಳಾ ಅಧ್ಯಯನ ಭಾಗ-೩, ಡಾ. ಹೇಮಲತಾ ಎಚ್.ಎಮ್.

೯. ಮಹಿಳಾ ಸಾಮಾಜಿಕತೆ, ಡಾ. ಜ್ಯೋತಿ ಶಶಿಕುಮಾರ

೧೦. ಮಹಿಳಾ ಅಧ್ಯಯನ ಭಾಗ-೨, ಡಾ. ಹೇಮಲತಾ ಎಚ್.ಎಮ್.

೧೧. ಮಹಿಳೆ ಮತ್ತು ಆರ್ಥಿಕತೆ, ಡಾ. ಟಿ.ಆರ್.ಚಂದ್ರಶೇಖರ

೧೨. ಮಹಿಳೆ, ಸಮಾಜ ಮತ್ತು ಸಂಸ್ಕೃತಿ, ಆರ್. ಇಂದಿರಾ

೧೩. ಮಹಿಳೆ, ದುಡಿಮೆ ಮತ್ತು ಬಿಡುವು, ಡಾ. ಎಚ್.ಎಸ್.ಶ್ರೀಮತಿ

೧೪. ಮಹಿಳೆ ಮತ್ತು ಅಭಿವೃದ್ಧಿ, ಕೆ. ಶಿವಚಿತ್ತಪ್ಪ

೧೫. ಕರ್ನಾಟಕದ ಲಂಬಾಣಿಗಳು, ಡಾ. ಪಿ.ಕೆ.ಖಂಡೋಬ

೧೬. ಲಂಬಾಣಿ ಸಂಸ್ಕೃತಿ, ಡಾ. ಡಿ.ಬಿ.ನಾಯಕ

೧೭. ಬದುಕೊಂದು ಚಿತ್ತಾರ (ಲಂಬಾಣಿ ಬುಡಕಟ್ಟು), ಡಾ. ಹರಿಲಾಲ ಪವಾರ

೧೮. ಲಂಬಾಣಿಗರು, ಬಸವರಾಜ ನೆಲ್ಲಿಸರ

೧೯. ಪಾದರಕ್ಷೆಗಳ ಕಲಾತ್ಮಕ ವಿನ್ಯಾಸ, ರೇವಣ್ಣ ಚಿಂತಾಮಣಿ (ಎಂ.ಎ.ಎ. ಕಿರುಪ್ರಬಂಧ)

೧. ಚಮ್ಮಾರದ ಕೌಶಲ್ಯದಿಂದ ತಯಾರಿಸಿದ ಚರ್ಮದಿಂದ ಮಾಡಿದ ಪಾದ ರಕ್ಷೆಗಳು



೨. ಕಂಪ್ಲಿಯಲ್ಲಿ ಆಧುನಿಕವಾದ ಪಾದರಕ್ಷೆಗಳನ್ನು ಮಾರುತ್ತಿರುವ ಸಮಗಾರ ನಾಗಪ್ಪ ನವರು



೩. ಚರ್ಮದ ಪಾದರಕ್ಷೆಗಳನ್ನು ಹೆಣೆಯುತ್ತಿರುವ ಸಮಗಾರ ಸುಲೋಚನ ರವರು



೪. ಪಾದರಕ್ಷೆಗಳ ತಯಾರಿಕೆಗಳಲ್ಲಿ ಪುರುಷನಿಗೆ ಸಹಾಯಕಳಾಗಿ ಮಹಿಳೆಯರು



೫. ಕೌದಿಹೆಣಿಕೆಯ ಮೊದಲು ದಾರವನ್ನು ಜೋಡಿಸಿಕೊಳುತ್ತಿರುವ ಮುಚಿಗೇರ ಕ್ಷಿಸಮ್ಮನವರು



೬. ಕೌದಿಹೆಣಿಕೆಯಲ್ಲಿ ತೊಡಗಿರುವ ಮುಚಿಗೇರ ಸುಜಾತನವರು



೭. ಕುಂಬಾರಿಕೆಯ ಕೌಶಲ್ಯದಿಂದ ಮೂಡಿಬಂದ ಮಡಿಕೆಗಳು



೮. ಕುಂಬಾರಿಕೆಯ ಕೌಶಲ್ಯದಿಂದ ಮೂಡಿಬಂದ ಮಡಿಕೆಗಳು ಮತ್ತು ಕುಡಿಕೆಗಳು



